# ಸಪ್ತರಂಗ

ಎನ್. ಎಸ್. ಗದಗಕರ

ಮನೋಹರ ಗ್ರಂಥ ಭಾಂಡಾರ
ಧಾರವಾಡ -

# ಮುನ್ನುಡಿ

ಇತ್ತೀಚೆಗೆ ಸಾಹಿತ್ಯವು ಬಹುಮುಖವಾಗಿ ಬೆಳೆಯುತ್ತಿರುವುದು ಸಂತೋಷದ ಸಂಗತಿಯಾಗಿದೆ. ಈ ಕಿರಿಹೊತ್ತಿಗೆಯಲ್ಲಿ ಎಂಟು ಜನ ಮಹನೀಯರ ವ್ಯಕ್ತಿ ಪರಿಚಯವನ್ನು ನನ್ನ ಗೆಳೆಯ ಶ್ರೀ. ಎನ್. ಎಸ್. ಗದಗಕರರು ಮಾಡಿಕೊಟ್ಟಿದ್ದಾರೆ. ವ್ಯಕ್ತಿ ಪರಿಚಯವೂ ಕೂಡ ಸಾಹಿತ್ಯದಲ್ಲಿ ಒಂದು ಮಹತ್ತ್ವದ ಅಂಗವಾಗಿದೆ; ಒಂದು ಮಹತ್ತ್ವದ ಸ್ಥಾನವನ್ನು ಪಡೆದಿದೆ. ನಾಡು, ನುಡಿ, ಸಂಸ್ಕೃತಿ ಕಲಾ, ನೈಪುಣ್ಯ ಮುಂತಾದ ಅತ್ಯಗತ್ಯ ವಿಷಯಗಳಲ್ಲಿ ಪ್ರವೀಣರಾಗಿ ನೆಗಳ್ತಿ ಪಡೆದ ಕೆಲವು ಮಹನೀಯರ ಜೀವನವನ್ನೂ, ಅವರು ಮಾಡಿದ ಸಾಹಸ, ಅವರು ಕೈಕೊಂಡಸಾಧನ, ಅವರು ಪಡೆದ ಸಿದ್ಧಿ, ಅವರು ಸಂಕಲ್ಪಿಸಿದ ಆದರ್ಶ—ಮುಂತಾದವುಗಳನ್ನೂ ಯಥಾಸ್ಥಿತಿಯಾಗಿ ನಿರ್ದುಷ್ಟವಾಗಿ ಓದುಗರೆದುರು ಚಿತ್ರಿಸುವದೆ ವ್ಯಕ್ತಿ ಪರಿಚಯ. ಬರೆಹಗಾರನು ತನ್ನ ಬಗೆಯೊಂದಿಗೆ ಅವರ ಬಗೆಗೂಡಿಸಿ, ಅವರ ಒಲವು ವೈಶಿಷ್ಟ್ಯಗಳನ್ನು ನಿರೀಕ್ಷಿಸಿ, ಸಹೃದಯತೆಯಿಂದ ಅವರ ಕೃತಿಗಳನ್ನು ಅಳೆದು, ತನಗೆನಿಸಿದುದನ್ನು ಬರೆಯುವದೆ ಅವನ ವ್ಯಕ್ತಿಯ ಅಭ್ಯಾಸವಾಗಿರಬೇಕು. ಇಂತಹ ಪೂಜ್ಯ ಮಹನೀಯರ ಹಲಕೆಲವಾದರೂ ಆಚರಣೆಗಳು ನಮ್ಮ ಹೊಸಪೀಳಿಗೆ ಕಲಿತುಕೊಳ್ಳಲಿ ಎಂಬುದು ಪರಿಚಯಕಾರನ ಉದ್ದೇಶವಾಗಿರಬೇಕು. ವ್ಯಕ್ತಿಯ ಜೀವನದ ಅಭ್ಯಾಸದಲ್ಲಿ ಒಂದು ಹೆಚ್ಚಿನ ಉದ್ದೇಶ ಸಾಧಿಸುವದು. ಅವನು ಪಟ್ಟ ಸುಖ ದುಃಖಗಳು, ಅವನ ಸಾಹಸಮಯ ಜೀವನ, ಅವನ ಮನಸ್ಸಿನ ಚಲನವನಗಳು, ಒಲವು ಓಟಗಳು. ಯಾವ ಕಾಲಕ್ಕೂ ಅವನ ಮನಸ್ಸಿನ ಸ್ಥಿತಿ, ಮನಸ್ಸಿನಲ್ಲಿಯ ಆವೇಗಗಳು ಇವು ಎಷ್ಟರಮಟ್ಟಿಗೆ ಅವನ ಕೃತಿಯಲ್ಲಿ ಇಡಿಯಾಗಿ ಇಳಿದಿವೆಯೆಂಬುದನ್ನು ಕಂಡುಕೊಳ್ಳಲು ಹಗುರಾಗುವದು; ಅಲ್ಲದೆ ಅವನ ಕೃತಿಗಳಿಗೂ ಸಂಪೂರ್ಣ ಅರ್ಥ ಹೊಂದುವದು. ವ್ಯಕ್ತಿಪರಿಚಯಕ್ಕೆ ಐತಿಹಾಸಿಕ ಆವಶ್ಯಕ ಮಹತ್ವವೂ ಬಂದಿದೆ. ಇಂತಹ ಶತಮಾನದಲ್ಲಿ, ಇಷ್ಟು ವರ್ಷಗಳಿಂದ ಇಷ್ಟು ವರ್ಷಗಳ

ವರೆಗೆ ಇಂತಹ ಮಹನೀಯರಿದ್ದರು, ಅವರು ಇಂತಿಂತಹ ಕೃತಿಗಳನ್ನೆಸಗಿದರು—ಅವರ ಜೀವನವಿಂತಹದಿದ್ದಿತು—ಆ ಕಾಲಕ್ಕೆ ಇಂತಹ ಸಮಸ್ಯೆಗಳಿದ್ದವು—ಇಂತಹದು ಸಾಮಾಜಿಕ ಜೀವನವಿದ್ದಿತು—ಎಂದು ಮಹತ್ತ್ವದ ಮುಖ್ಯಾಂಶಗಳನ್ನು ಕಾಯ್ದಿಡಲು ಇತಿಹಾಸಕಾರರಿಗೆ ಸರಳವಾಗುವದು.

'ಸಪ್ತರಂಗ' ವನ್ನು ತೋರಿದ ಶ್ರೀ. ಗದಗಕರರು ಮೆಲ್ಲನೆ ಎಲ್ಲರಿಗೂ ಪರಿಚಿತರಾಗಿದ್ದಾರೆ. ಅವರು ಕನ್ನಡಿಗರಿಗೆ ಅನೇಕ ಹರಟೆಗಳನ್ನು ಅರ್ಪಿಸಿದ್ದಾರೆ. ಕೆಲವು ಮಹನೀಯರ ಸಂಗಡ ಮಾತನಾಡಿ, ಕೆಲವರಿಂದ ಕೇಳಿ, ಕೆಲವರನ್ನೂ ನೋಡಿ ಈ 'ಸಪ್ತರಂಗ' ವನ್ನು ರಚಿಸಿದ್ದಾರೆ. ಓದುಗರಿಗೆ ಯಾವ ರಂಗ ರುಚಿಸುವದೊ, ಅಂತಹ ರಂಗ ಓದುಗರಿಗೆ ಆತ್ಮೀಯವಾಗಬಹುದು. ಇನ್ನು ಬರೆಹಗಾರರಿಗೆ ಯಾವ ರಂಗರುಚಿಸಿದೆ ಎಂಬುದನ್ನು ಓದುಗರೆ ಓದಿ ತಿಳಿದುಕೊಳ್ಳಬೇಕೆ ಹೊರತು ನಾನು ಇಲ್ಲಿ ಯಾವುದನ್ನು ಹೇಳಬಯಸುವದಿಲ್ಲ.

**ಅನಿರುದ್ಧ**

# ಅರಿಕೆ

ವ್ಯಕ್ತಿಪರಿಚಯದ ಕಲೆ ಸಾಹಿತ್ಯದ ಅಂಗವೆಂದು ಪರಿಗಣಿಸಲಾದ ಕಾಲದಿಂದ ಅದರ ಮಹತ್ವ ಸಾಹಿತ್ಯೋಪಾಸಕರಿಗೆ ಎನಿಸಿದೆ. ಮುಖ್ಯವಾಗಿ ಅದನ್ನು ಬರೆಯಲು ಯತ್ನಿಸುವವನಿಗೆ ತೊಂದರೆಗಳೇ ಹೆಚ್ಚು. ಇಲ್ಲಿ ಸಂಕಲಿಸಲಾದ ಎಂಟು ಪರಿಚಯಗಳನ್ನೋದುವಾಗ ಯಾವೂ ಒಂದೊಂದು ದೃಷ್ಟಿಯಿಂದ ಒಮ್ಮೊಮ್ಮೆ ಪರಿಪೂರ್ಣವೆನಿಸಲಿಕ್ಕಿಲ್ಲ. ಅನುವು ದೊರೆತಾಗ ಕೇಳಿ, ಓದಿ, ಸಂದರ್ಶಿಸಿ ಕಲೆಹಾಕಿದ ಲೇಖನಗಳಿವು. 'ಸಪ್ತರಂಗ' ಎಂಬ ಈ ಸಂಕಲನೆಯ ತಲೆಬರಹವು ಲೇಖನಗಳ ಸಂಖ್ಯೆಯ ದ್ಯೋತಕವಾಗಿಲ್ಲ. ಕೇವಲ ವೈವಿಧ್ಯದ ಕಲ್ಪನೆಗೋಸುಗ ಬಳಸಲಾಗಿದೆ ಎಂದು ಓದುಗರು ಗ್ರಹಿಸಬೇಕಾಗಿ ವಿನಂತಿ. ವ್ಯಕ್ತಿಯ ಅಭ್ಯಾಸಕ್ಕಾಗಿ ನನಗಾಗಲಿ, ಅಥವಾ ನನ್ನಂತೆ ಬರೆಯುವ ಬೇರೆ ಹೊಸ ಬರೆಹಗಾರರಿಗಾಗಲಿ 'ಸಪ್ತರಂಗ' ಸಂಕಲನೆ ಕಿಂಚಿತ್ತಾದರೂ ಸ್ಫೂರ್ತಿ ಒದವಿಸುವುದಾದರೆ ಈ ಪ್ರಯತ್ನ ವ್ಯರ್ಥವಲ್ಲ.

'ಸಪ್ತರಂಗ' ಎಂಬ ಪರಿಚಯದ ಈ ಸಂಕಲನೆಗೆ ಸೌಹಾರ್ದದಿಂದ ಮುನ್ನುಡಿ ಒದವಿಸಿದ 'ಅನಿರುದ್ಧ' ರಿಗೂ ಸಲಹೆಸೂಕ್ತಿಗಳಿಂದ ನೆರವಾದ ಗೆಳೆಯರಿಗೂ, ಕೊನೆಗೆ ಅಲ್ಪಕಾಲದಲ್ಲಾದರೂ ಅಂದವಾಗಿ ಅಚ್ಚು ಹಾಕಿಸಿ ಕೊಟ್ಟ ಲಲಿತ ಮುದ್ರಣಾಲಯದ ಒಡೆಯರಿಗೂ ಹಾಗೂ ಪ್ರಕಾಶಕರಿಗೂ ನಾನು ಚಿರಋಣಿ.

ಎನೆಸ್ಕೆ

# ಪರಿವಿಡಿ

## ಶ್ರೀರಂಗ

ಕಾಲೇಜಿನ ರಂಗಭೂಮಿಯಲ್ಲಿ ಮಾತಿನ ಇಂದ್ರಜಾಲ, ಜೀವದ ಗೆಳೆಯರಲ್ಲಿ ಬಿಗುಹಿನ ತಲೆ ತುರಿಸುವ ಹರಟೆ, ನಾಟ್ಯ ವಿಲಾಸಿಗಳ ರಂಗ ಭೂಮಿಯಲ್ಲಿ ನುರಿತ ನಟರನ್ನು ತಲೆದೂಗಿಸುವ ಕಲೆ, ಸಮಾಜದಲ್ಲಿ ಪೌರುಷ ಶೂನ್ಯ ಆಚಾರ ವಿಚಾರಗಳ ಅವಹೇಳನ, ಪರಿಷತ್ತು ಸಭೆಗಳಲ್ಲಿ ಪರಂಪರೆಯ ಹುಚ್ಚು ವಿಚಾರಗಳಿಗೆ ಆಹ್ವಾನ, ಸಾಹಿತ್ಯದಲ್ಲಿ ಪ್ರತಿ ಶೇಕ್ಸಪಿಯರ ಅಥವಾ ಕಾಲಿದಾಸನೆನ್ನುವ ಮೋಡಿ, ಮಾತಿನಲ್ಲಿ ಚಕಮುಕಿ, ಕಿರಿಯರಲ್ಲಿ ಆದರ್ಶ-ಅನುಕರಣೀಯ ಹಿರಿಯ— ಇನ್ನೂ ಯಾತರಲ್ಲಿ ಏನೋ ಏನೋ ಶ್ರೀರಂಗರ ಅಥವಾ (ಪ್ರೊ. ಜಾಗಿರದಾರ ರಂಗಾಚಾರ್ಯರ) ಮೇಲ್ಮೆ. ಸಮಾಜದ ವಿವಿಧ ಚಟುವಟಿಕೆಗಳಲ್ಲಿ ಆಸ್ಥೆವಹಿಸಿ ಕೌಶಲ ಪಡೆದ ಶ್ರೀರಂಗರ ಕಾರ್ಯ ರಂಗವು ಇಷ್ಟೊಂದು ವಿಶಾಲ-ಅದ್ಭುತವಿದ್ದರೂ ಆ ವ್ಯಕ್ತಿಯಲ್ಲಿ ತೋರುವ ಒಂದು ಬಗೆಯ ಅತೃಪ್ತಿ ಅಸಮಾಧಾನದ ಗೂಢವೇನಿರಬಹುದು ? ಇಲ್ಲವೇ ಪ್ರತಿಯೊಂದು ವಿಷಯದಲ್ಲಿ ಉತ್ಸುಕತೆ, ಕ್ರಾಂತಿಕಾರಕ ಮನೋವೃತ್ತಿ ತನ್ಮಯತೆ ತಲೆದೋರಿದರೂ ಯಾವ ವಿಷಯದ ಬಗೆಗೂ ಅವರಿಗೆ ಆಳವಾದ ಜ್ಞಾನವು ಇರಲಿಕ್ಕಿಲ್ಲವೇ ಹೇಗೆ ? ಇಂತಹ ಇನ್ನೂ ಅನೇಕ ಜಟಿಲ ಸಮಸ್ಯೆ ಗಳು ತಲೆಯೆತ್ತಿದಂದಿನಿಂದ ಶ್ರೀರಂಗರ ವ್ಯಕ್ತಿತ್ವವನ್ನು ಕೂಲಂಕಷವಾಗಿ ಪರಿಕಿಸುವ ತವಕವು ನನ್ನಲ್ಲಿ ಹೆಚ್ಚಿತು.

ಮುಖ್ಯವಾಗಿ ನಮಸ್ಕಾರ ಚಮತ್ಕಾರಗಳ ಸೋಗು ಆಡಂಬರಗಳೆಂದರೆ ಪ್ರೊಫೆಸರರಿಗೆ ಮುಳ್ಳು ಇದ್ದಂತೆಂದು ಅವರ ಚಿರಪರಿಚಿತರಿಗಷ್ಟೇ ಅನುಭವ. ಅಷ್ಟು ತಿರಸ್ಕರಣೀಯವವು. ಹೃದಯದಲ್ಲಿ ಆತ್ಮೀಯತೆ ಹುದುಗಿದ್ದರೆ ಹೊರ ಗಿನಿಂದ ಕಡತಂದಂತಹ ಹುಚ್ಚು ನಗೆ, ವಿಚಿತ್ರ ನಟನೆ ಏಕೆ?—ಎಂಬ ತತ್ವ ವವರದು. ಇಂತಹ ವಿಕಲ್ಪಗಳಿಂದಲೇ ಶ್ರೀರಂಗರು ನಿಷ್ಠುರರೆಂದು ಎಂದಿ ನಿಂದಲೂ ಪ್ರತೀತಿಯುಂಟಾಗಿದೆ. ಅಲ್ಲದೇ ತಪ್ಪು ತಿಳಿದ ತಂಡಗಳೂ ಇವೆ.

ನಿಜವಾಗಿ ನೋಡಿದರೆ ಪರಂಪರೆಯು ಸುಳ್ಳುದೇವರಲ್ಲಿ, ಅನ್ಯಾಯ ಅತ್ಯಾಚಾರಗಳಲ್ಲಿ ಪರಿಣಮಿಸುವ ಕುರುಡು ಆಚಾರ-ವಿಚಾರ-ಧರ್ಮಗಳಲ್ಲಿ ಆಚಾರ್ಯರಿಗೆ ಯಾವ ನಂಬಿಕೆ ಇಲ್ಲ.

ವಿಚಾರ ಸ್ವಾತಂತ್ರ್ಯ, ತಮಗೆನಿಸುವಂತೆ— ನಿಷ್ಠುರವಾದರೂ ಚಿಂತೆಯಿಲ್ಲ— ಆತ್ಮವಂಚನೆ ಮಾಡಿಕೊಳ್ಳದೇ ಜನಸಾಮಾನ್ಯರ ಕಲ್ಯಾಣಕ್ಕಾಗಿ ಹೋರಾಡುವ ಬುದ್ಧಿ ಶ್ರೀರಂಗರಿಗೆ ರಕ್ತಗತವಾಗಿವೆ; ಅಂತೇ ಶ್ರೀಯುತರು ಮಿತಭಾಷಿಗಳೆಂದು ಅಪರಿಚಿತರಿಗೆ ತೋರಿದರೂ ಒಮ್ಮೆ ಒಬ್ಬರ ಬಗೆಗೆ ಆದರ ಉಂಟಾದರೆ ತೀರಿತು. ತಿಂಡಿ ತೀರ್ಥದ ಪರಿವೆ ಇಲ್ಲ. ಹಾಗೆ ಅವರೊಡನೆ ತುದಿ ಮೊದಲಿಲ್ಲದ ಹರಟೆ. ನಿರಂತರ ಸ್ನೇಹಕ್ಕೆ ಕೊನರು. ಕಿರಿಯರಲ್ಲಿ ಸಾಹಸೀ ಮನಸ್ಸಿನ ಜೊತೆಗೆ ಸಾಹಿತ್ಯ ಸಂಸ್ಕಾರ, ಸಮಾಜ ಜೀವನದ ಅವಶ್ಯಕತೆಯು ಅರಿವಾಗಲೆಂದು ಸತತವೂ ಅವರ ಹೋರಾಟ. ಅಂತೇ ಅವರ ನಿಸ್ಸೀಮ ಸಲಹೆ ಸೂಕ್ತಿಗಳಿಂದ ವಿದ್ಯಾವರ್ಧಕ ಸಂಘವು ಏಕೀಕರಣದ ರಂಗಭೂಮಿಯಾದುದಲ್ಲದೇ ಕಿರಿಯ ಹಿರಿಯರ ಸಾಹಿತ್ಯ ಚಟುವಟಿಕೆಗಳಿಗೆ ಅಂತಃಸ್ಫೂರ್ತಿಯನ್ನೊದಗಿಸುವ ಕೇಂದ್ರವಾಗಿದೆ. ಧಾರವಾಡದ ಕಲೋಪಾಸನೆಯ ಜೀವಾಳವಾಗಿದೆ. ಸಂಘದ ಬಗ್ಗೆ ಹಿರಿಯಾಸೆಗಳನ್ನು ತುಂಬಿಕೊಂಡ ಆಚಾರ್ಯರಿಗೆ ಎಷ್ಟೋ ಬೇರೆ ಕೆಲಸಗಳಿದ್ದರೂ ಅವನ್ನು ಬದಿಗಿಟ್ಟು ಸಂಘಕ್ಕೆ ಬಂದು ಅಲ್ಲಿಯ ಯೋಗಕ್ಷೇಮ ತೆಗೆದುಕೊಳ್ಳದಿದ್ದರೆ ಏನೋ ಒಂದು ಬೆಲೆಯುಳ್ಳ ವಸ್ತು ಕಳೆದುಕೊಂಡಾಗ ಆಗುವಂತಹ ಹಳಹಳಿ ಹಳವಂಡವೆನಿಸುವದೆಂದರೆ ಯಾವ ಅಚ್ಚರಿಯಿಲ್ಲ. ಅಂದು ಮನಸಿನ ಸಮಾಧಾನದೊಡನೆ ನಿದ್ರೆಯೂ ಹಾರಿಹೋಗುವದೆಂದರೆ ಯಾರಿಗೂ ಅತಿಶಯೋಕ್ತಿಯೆಂಬ ಕಲ್ಪನೆಯಾಗಲಿಕ್ಕಿಲ್ಲವಷ್ಟೇ! ಕನ್ನಡದ ನುಡಿ ಕಿಡಿಯಾಗಬೇಕು; ಅಮೃತವಾಗಬೇಕು; ನಕ್ಷತ್ರ ಬಿಂದುವಾಗಬೇಕು-- ಎಂಬ ಭಾವನೆ ತಳೆದ ಡಿ. ವಿ. ಗುಂಡಪ್ಪನವರಂತೆ ಶ್ರೀರಂಗರಿಗೂ ಕನ್ನಡಕ್ಕಾಗಿ ಅನಿರ್ವಚನೀಯ ವ್ಯಾಮೋಹ.

ಕನ್ನಡ ನಾಡಿನಲ್ಲಿ ಕನ್ನಡ ನುಡಿಯ ಬಗ್ಗೆ ಕನ್ನಡಿಗರ ಅಭಿಮಾನ ಜಾಗ್ರತವಾಗಲೆಂದು ಆಗಾಗ ಪ್ರಮುಖ ಸಾಹಿತಿಗಳ ವಿದ್ವತ್ಪ್ರಚುರ ಭಾಷಣಗಳನ್ನೇರ್ಪಡಿಸುವಲ್ಲಿ, ಕನ್ನಡ ಚಟುವಟಿಕೆಗಳ ಸಂಘಗಳನ್ನು ಸ್ಥಾಪಿಸುವಲ್ಲಿ ನಡೆಸುವದರಲ್ಲಿ ಜಾಗೀರದಾರರು ಆಗಾಗ ತಮ್ಮ ಬಿಡುವಿನಲ್ಲಿ ಹೆಚ್ಚಿನ

ಶ್ರಮವಹಿಸುತ್ತಿರುವದು ಕಡಿಮೆಯ ಸಂಗತಿಯಲ್ಲ. ಕನ್ನಡ ಸಾಹಿತ್ಯ ಪರಿಷತ್ತಿನಷ್ಟು ಅಖಿಲ ಕರ್ನಾಟಕದ ಸಾಂಸ್ಕೃತಿಕ ಅಭಿವೃದ್ಧಿಗಾಗಿ ವಿದ್ಯಾವರ್ಧಕ ಸಂಘವು ಹೋರಾಡಲೆಂದು ಅವರ ಮನೀಷೆ. ಈಗಿನ ಅದರ ಗತಿ ತೃಪ್ತಿದಾಯಕವಿದ್ದರೂ ಇನ್ನೂ ಹೆಚ್ಚಾಗಿ ಪ್ರಗತಿಯಾಗುವದು ಅವರಿಗೆ ಎಂತಹ ಸವಿಗನಸು! ಕಾರ್ಯರಂಗದಲ್ಲಿ ಕಾಲಿಡದೆ ಹಿನ್ನೆಲೆಯಲ್ಲಿಯೇ ಇದ್ದುಕೊಂಡು ಕನ್ನಡದ ಚಟುವಟಿಕೆಗಳನ್ನು ಯಶಸ್ವಿಯಾಗಿ ಜರುಗಿಸಬೇಕೆಂಬ ಆಚಾರ್ಯರ ನಿಸ್ವಾರ್ಥತೆ, ಕಳಕಳಿ ಮಾದರಿಯವೇ! ಕತೆ, ಹರಟೆ, ಏಕಾಂಕ, ಪ್ರಬಂಧ ಕಾವ್ಯಗಾಯನ, ಮಾತುಗಾರಿಕೆಯ ಸ್ಪರ್ಧೆ— ಮೊದಲಾದ ಸಾಹಿತ್ಯೋದ್ಯಾನದ ಸುಮಗಳ ಸೌಂದರ್ಯವು ವಿದ್ಯಾರ್ಥಿ ವಿದ್ಯಾರ್ಥಿನಿಯರಿಗೆ ದೊರೆಯುವಂತಾಗಿ ಸುಸಂಸ್ಕೃತರೆನಿಸಿಕೊಳ್ಳಲೆಂದು ಶ್ರೀರಂಗರ ಹಂಬಲ, ಉತ್ಕಟೇಚ್ಛೆ. ಅಂತೇ ಸಂಘ ಸಂಸ್ಥೆಗಳಲ್ಲದೇ 'ವಾಗ್ಭೂಷಣ' ದಂತಹ ಕನ್ನಡ ಮಾಸ ಪತ್ರಿಕೆಗಳ ಏಳ್ಗೆಗಾಗಿ ಅವರು ಆತ್ಮಾರ್ಪಣೆ ಮಾಡಿದುದುಂಟು.

ಎಂತಹ ಸಣ್ಣ ಕೆಲಸ ಕೈಕೊಂಡರೂ ತನ್ಮಯರಾಗಿ ಬಿಡುವದು ಶ್ರೀಯುತರದೊಂದು ಹುಟ್ಟುಗುಣ. ಕೆಲಸದಲ್ಲಿ ತೊಡಗಿದಾಗ–ಅದು ಮುಗಿಯುವವರೆಗೆ––ನೆಟ್ಟಗೆ ಉಸಿರು ಕೂಡ ಆಡಿಸರು. ಒಂದು ನಾಟಕದ ರಂಗ ತಾಲೀಮನ್ನೆ ತೆಗೆದುಕೊಳ್ಳುವಾ. ಕುಳಿತ ಸ್ಥಳದಿಂದ ಸ್ವಲ್ಪವೂ ಕದಲುವವರಲ್ಲ. ಬೇರೆಯವರು ಆಕಳಿಸಿ ತೂಕಡಿಸಿ ಮೂಗುಮುರಿದು ಮೇಲಕ್ಕೇಳುವ ಕಣ್ಣನ್ನೆ ಕೈಸನ್ನೆ ನಡಿಸಿದರೂ, ಸ್ಥಿತಪ್ರಜ್ಞಾವಸ್ಥೆಯನ್ನೂ ಅಂತಹ ಮಗ್ನತೆಯನ್ನೂ ಅವರೂ ಬಿಡರು. ವಿದ್ಯಾರ್ಥಿ ಪರಿಷತ್ತಿನ ಸದಸ್ಯರ ಆಯ್ಕೆಯ ದಿನದ ಅವರ ಮನಸಿನ ತಾಳ್ಮೆಯು ನಿಜವಾಗಿಯೂ ಮಾದರಿಯದ್ದಾಗಿತ್ತೆಂದು ಅಲ್ಲಿದ್ದ ನನಗೆ ಅನಿಸದೇ ಹೋಗಲಿಲ್ಲ. ನಡುವೆ ಒಮ್ಮೆ ಹೆಸರಿಗೆ ಚಹಾ ಕುಡಿಯುವ ಅಲ್ಪವಿರಾಮ ದೊರೆತರೂ ಮನದ ಹಕ್ಕಿಯು ಮಾತ್ರ ಕಾರ್ಯದಾಗಸದಲ್ಲಿಯೇ! ತೀರ ಬೆರಳಲ್ಲೆಣಿಸುವಷ್ಟು ವರ್ಷಗಳಲ್ಲಿಯೇ ಅಸಂಖ್ಯ ಹಾಗೂ ವಿವಿಧ ಕಲಾಕುಸುಮಗಳನ್ನು ಕನ್ನಡ ದೇವಿಯ ಮುಡಿಗೆ ಭಕ್ತಿ ಭಾವಪುರಸ್ಸರವಾಗಿ ನೀಡಿದ ಈ ಅಪೂರ್ವ ವ್ಯಕ್ತಿಯಲ್ಲಿ ತಾಳ್ಮೆಗುಣದ ಅತಿರೇಕವಿದೆಯೆಂದು ಯಾವ ಓದುಗನೂ ಒಪ್ಪತಕ್ಕ ಮಾತೇ! ಸರಿ. ತಾಳ್ಮೆಯ ನೆರವು ಇದೆಯೆಂದು ಬರೆದದ್ದನ್ನೆ ಸುಧಾರಣೆಯ ಮಬ್ಬಿನಿಂದ ಹತ್ತಾರು ಸಲ ತಿದ್ದುವ ಕೆಳತರಗತಿಯ ಲೇಖಕರ ಚಟವೂ ಇವರಿಗಿಲ್ಲ!

ಸಾಹಿತ್ಯದಲ್ಲಿ ಪರರ ಬೆಳಕಿನಿಂದ ತಾನು ಬಾಳುವದು ಪಾಪ ಅನ್ಯಾಯ ವೆಂದು ಶ್ರೀರಂಗರ ತತ್ವ. ಅರ್ಥದ ಕಲ್ಪನೆಯಿಲ್ಲದೇ ಬೇರೆಯವರ ಅವತರಣಿಕೆಯಿಂದ ಪುಟ ತುಂಬಿಸಿಕೊಳ್ಳುವದು ತನ್ನ ಪ್ರತಿಭೆಗೆ ಬುದ್ಧಿಯ ಬೆಳವಣಿಗೆಗೆ ಅಡೆತಡೆ. ನಿಜವಾದ ಅವತರಣಿಕೆ ತನ್ನನ್ನು ತಾನು ಸ್ಪಷ್ಟೀಕರಣ ಮಾಡಿಕೊಳ್ಳಬೇಕಲ್ಲದೇ ಸಂದರ್ಭದ-ಸನ್ನಿವೇಶದ ಔಚಿತ್ಯ ಹೆಚ್ಚಿಸುವಂತಿರಬೇಕೆಂದು ಅವರಂತೆ ತಿಳಿದವರೆಷ್ಟು ಜನ ? ಅಂತೇ ಸ್ವತಂತ್ರವಾದ ವಿಚಾರ್ರ ತಮ್ಮದೇ ಆದ ನಿರ್ಭೀತ ಶೈಲಿ, ಭಾವಗರ್ಭಿತ ಶಬ್ದ, ಅಚ್ಚುಕಟ್ಟಾದ ವಾಕರಚನೆ, ವಿಷಯದ ಯಥಾರ್ಥ ಅರಿವು– ತೀರ ಅವಶ್ಯಕವೆಂದು ಶ್ರೀರಂಗರು ಸೂಚ್ಯವಾಗಿ ಬೋಧಿಸುತ್ತಿರುವದು–– ಕಿವಿಗೊಡುವ ಕಲೋಪಾಸಕರಿಗಷ್ಟೆ ! ನಿನ್ನದೇನು ಎಂದು ವಾದಿಸುವ ಹಟಮಾರಿಗಲ್ಲ !

ಶ್ರೀರಂಗರ ವಿಷಯಗ್ರಹಣ ಶಕ್ತಿ ಅದ್ಭುತವಾದುದೆಂದು ಬಾನುಲಿಯಲ್ಲಿಯ ಅವರ ಭಾಷಣಗಳನ್ನು ಕೇಳಿದ ವಿದ್ಯಾವಂತರಿಗೆ ಬೇರೆ ತಿಳಿಸಿಕೊಡಬೇಕೆಂಬ ಹಟವಿಲ್ಲ. ರಾಮಾಯಣ ಮಹಾಭಾರತದಂತಹ ಮಹಾ ಕಾವ್ಯಗಳ ಬಗೆಗೂ, ವೇದ ಉಪನಿಷತ್ತಿನಂತಹ ಗಡಚು ವಿಷಯಗಳ ಬಗೆಗೂ— ಶಾಲೆಯ ಚಿಕ್ಕ ಮಕ್ಕಳಿಗೂ ತಿಳಿಯುವಂತಹ ತಿಳಿಯಾದ-ಅಂದವಾದ ಮಾತುಗಳಿಂದ ಹೇಳುವ ಕಲೆ ತೀರ ಕೆಲವರ ಸೊತ್ತಾಗಿದೆ. ಮಹಾಕಾವ್ಯ ಉಪನಿಷತ್ತುಗಳಲ್ಲಿಯ ಉಪಕತೆ ಕತೆಗಳ ತಂತ್ರವೆಂತಹದು ! ವಿಷಯದ ವಿಸ್ತಾರವೆಂತಹದು ! ತತ್ವಗಳ ವೈವಿಧ್ಯ ಕ್ಲಿಷ್ಟತೆ ಎಷ್ಟೊಂದು ಬೆರಗುಗೊಳಿಸುವಂತಹವು ! ಹೀಗಿದ್ದರೂ ಕಲಾಪೂರ್ಣವಾಗಿ ತಿಳಿಸುವ ಅವರ ಬುದ್ಧಿಗೆ ಕಂಡು ಆಗದವರು ಸಹ ತಲೆದೂಗಲೇಬೇಕು. ಅಲ್ಲದೇ ಶಾಲೆ ಕಾಲೇಜುಗಳಲ್ಲಿ ತಾಸೆರಡು ತಾಸು ಗಹನ ವಿಷಯದ ಮೇಲೆ ವಿಚಾರಪ್ರಚೋದಕವಾಗಿ ಅಧಿಕಾರಯುಕ್ತ ವಾಣಿಯಿಂದ ಮಾತಾಡಬಲ್ಲರೆಂದ ಮೇಲೆ ಅವರ ತಿಳಿವಿನ ವಿಸ್ತಾರ ವೆಂತಹದಿರಬೇಕೆಂದು ಊಹಿಸುವದು ಹೇಗಾದರೂ ಅಶಕ್ಯ.

ಸಂಸ್ಕೃತ ವಿಷಯದಲ್ಲಿ ಶ್ರೀರಂಗರಿಗೆ ಪ್ರತಿಭೆಯಿದ್ದರೂ, ಕನ್ನಡಕ್ಕಾಗಿ ದೈವೀ ಮೋಹವಿದ್ದರೂ, ರಾಜಕಾರಣದಲ್ಲಿ ಅತೀವ ಅಭಿರುಚಿ. ‘ ಇಂದಿನ ಕಾಲೇಜ ಶಿಕ್ಷಣಕ್ರಮದಲ್ಲಿಯ ಸಂಸ್ಕೃತ ಪಠ್ಯಪುಸ್ತಕಗಳ ಅಭ್ಯಾಸವು ವಿದ್ಯಾರ್ಥಿ ವಿದ್ಯಾರ್ಥಿನಿಯರಿಗೆ ಸಮಾಜ ಜೀವನದಲ್ಲಿ ಉಪಯುಕ್ತವಾಗಿಲ್ಲ.

ಶಿಕ್ಷಣವು ಪೂರ್ತಿಯಾಯಿತೆಂದರೆ ಬರೀ ಗ್ರಂಥಗಳ ಹೆಸರು ಸಂಖ್ಯೆಗಳ ಮಟ್ಟಿಗಷ್ಟೇ ಅವುಗಳ ನೆನಪು. ಉಳಿದುದೆಲ್ಲ ತಾಜಮಹಾಲ ಗೋಳಗುಮಟ. ಜಗತ್ತಿನಲ್ಲಿಯ ಭಿನ್ನ ರಾಷ್ಟ್ರಗಳ, ಭಿನ್ನ ಸಂಸ್ಕೃತಿಯ ನಡೆನುಡಿ ಆಚಾರ ವಿಚಾರಗಳ ಸ್ಪೃಜ ಕಲ್ಪನೆಯಾಗಬೇಕಿದ್ದಲ್ಲಿ, ಆಂಗ್ಲಭಾಷೆ-ರಾಜಕಾರಣ ಅರ್ಥಶಾಸ್ತ್ರದ ಪರಿಚಯ ಅತ್ಯವಶ್ಯ !' ವೆಂದು ಶ್ರೀರಂಗರ ಅಭಿಪ್ರಾಯ.

ಸಮಾಜ-ಜೀವನದ ಬಗ್ಗೆ ಶ್ರೀರಂಗರ ಕಲ್ಪನೆ, ಕನ್ನಡ ಸಾಹಿತ್ಯದಲ್ಲಿಯ ಹರಟೆಯಸ್ವರೂಪ-ಒಳಹೊಕ್ಕು ನೋಡಬೇಕೆನಿಸಿದರೆ ಅವರ ವ್ಯಂಗ್ಯ ಪ್ರಬಂಧಗಳನ್ನೇ ನಾವು ಮೊಟ್ಟಮೊದಲು ಓದಬೇಕು. 'ಹರಟೆಯ ಮಲ್ಲ' ರೆಂಬ ಹೆಸರಿನಿಂದ ಹರಟೆ ಬರೆಯುತ್ತಿದ್ದ– ಈಗ ಅವುಗಳನ್ನು ಬರೆಯುವದು ಬಿಟ್ಟಿರುವ— ಸಿದ್ದವ್ವನಹಳ್ಳಿ ಕೃಷ್ಣಶರ್ಮರೊಬ್ಬರನ್ನು ಬಿಟ್ಟರೆ ಶ್ರೀರಂಗರಂತಹ ಹರಟೆಗಾರರು ತೀರ ವಿರಳ. ಕಾರಂತರಾಗಲಿ ಸಿ. ಕೃಷ್ಣಶರ್ಮರಾಗಲಿ ಎ. ಎನ್. ಮೂರ್ತಿರಾಯರಾಗಲಿ ಬರೆದುವು ನಗೆಯಲಹರಿಯಿಂದ, ಬುದ್ಧಿಯ ಬೆಳಕಿನಿಂದ ರಂಜಕವಿದ್ದರೂ, ಪ್ರಮಾಣದಲ್ಲಿ ಅವು ಶ್ರೀರಂಗರಿಗಿಂತ ಕಡಿಮೆಯೆ. ವಿಷಯ ವೈವಿಧ್ಯ, ವ್ಯಾಪಕತೆ, ಜೀವಂತ ಶೈಲಿ, ನಗೆಯ ಮಿಂಚಿನ ದೃಷ್ಟಿಯಿಂದ ಶ್ರೀರಂಗರ ಗಿಳಿ, ಕುದುರೆ, ಕಾಗೆ, ಕತ್ತೆ ಎಂಬಂತಹ ಪ್ರಾಣಿಗಳ ಮೇಲಿನ ಮೀಮಾಂಸೆಯ ವಿಭಾಗವನ್ನು ಓದುಗರು ನೋಡಬಹುದು. ವಿಚಾರದ ಗಾಳಿಗೋಪುರ, ಉಚಿತ ಶಬ್ದಗಳ ನಿರರ್ಗಳ ಹೊನಲು, ಕಲಾಕಲ್ಪತೆಯ ನಿರೂಪಣೆ ಬೇಕಿದ್ದಲ್ಲಿ— ನಾನು ದಶರಥನಾಗಿದ್ದರೆ, ನಾನು ವೈಕುಂಠವಾಸಿಯಾಗಿದ್ದರೆ, ನಾನು ದಶಕಂಠನಾಗಿದ್ದರೆ— ಎಂಬ 'ರೆ' ಮಾದರಿಯ ಪ್ರಬಂಧಗಳ ಮುಗಿಯದ ಮಾಲೆ ಇದ್ದೇ ಇದೆ. 'ಕಟ್ಟು ಅಥವಾ ಬಿಕ್ಕಟ್ಟು, ಶಿಕ್ಷಣವೆಂಬ ಶತಕ್ರತು ಕಲಿಯುಗದ ಕೈಪಿಡಿ, ಬರೆಹಗಾರನ ಬಜೆಟ್ಟು, ಸ್ವಲ್ಪದರಲ್ಲಿ ಸ್ವಾರಸ್ಯ, ಗಂಡನಗಂಡಾಂತರ, ದೋಸೆಯ ಪ್ರಾಣಹಿಂಸೆ, ಕೋಳಿಯೋ ನಮ್ಮ ಕಹಳೆ'— ಎಂಬ ಹರಟೆಗಳು ನಮ್ಮ ಸಮಾಜದ ಮುಂದಾಳುಗಳ ಮಂದಾಳುತನವನ್ನು, ಅಸಹಾಯ್ಯ–ಅವ್ಯವಸ್ಥೆಯನ್ನೂ ವಿಡಂಬನೆಯಿಂದ ಚಿತ್ರಿಸಿವೆ.

ನಮ್ಮ 'ಪಿಡುಗು ಪುಢಾರಿಗಳು' ಎಂಬ ಮಾಲೆಯಲ್ಲಿ ರಾಜಕೀಯ ರಂಗದಲ್ಲಿಯ ಕೆಲವು ವಿಚಿತ್ರ ವ್ಯಕ್ತಿಗಳ ಅಣಕು ವೀರಾವೇಶದ ಬಣ್ಣನೆಯುಂಟು. ಜನನಾಯಕರ ಚಿಂತಾಜನಕ ಪರಿಸ್ಥಿತಿಯನ್ನು ಅಲ್ಲಿ ಕಂಡಾಗ ನಾವು

ನಗೆಗಡಲಿನಲ್ಲಿ ಕೊಚ್ಚಿಕೊಂಡು ಹೋದರೆ ಯಾವ ಅಚ್ಚರಿಯಿಲ್ಲ. ಓದುಗರ ಮನಸೆಳೆಯುವ ಶ್ರೀರಂಗರ ಇಲ್ಲಿಯ ವೈಶಿಷ್ಟ್ಯವೆಂದರೆ ಈ ಲೇಖನಗಳ ಶೀರ್ಷಿಕೆಗಳ ವಿಷಯ. ನಮ್ಮ ಕುತೂಹಲ ಕೆರಳಿಸಿ ಪ್ರಸ್ತುತ ಸಮಸ್ಯೆಯ ಮಹತ್ವವನ್ನು ಹುಡುಗಾಟಿಕೆಯ ರೂಪದಿಂದ ಅವರು ನಿರೂಪಿಸುವರು. ಅವರಂತೆ ಸಾಮಾನ್ಯರಿಗೆ ತಲೆಹರಟೆ ಹೊಡೆಯುವ ಗಹನಕಲೆ ಸಾಧಿಸದಿದ್ದರೂ ಅತ್ಯಂತ ತಾಳ್ಮೆಯಿಂದ ಸಹೃದಯತೆಯಿಂದ ಅವುಗಳನ್ನು ನಾವು ಓದಿದರೆ ಸಮಸ್ಯಾ ಮಂಡನದ ತಂತ್ರವೂ, ತತ್ಪರಿಣಾಮಕ ಆನಂದವೂ ತಲೆದೋರುವವು. ವ್ಯಕ್ತಿಯ ಬುದ್ಧಿಯ ಮಾರ್ಪಾಟಿಗಾಗಿ, ಸ್ವಚ್ಛಂದ ವಿಹಾರಕ್ಕಾಗಿ ಇಷ್ಟಾದರೂ ಸ್ವಲ್ಪವಲ್ಲ!

ಇನ್ನು ಜಾಗೀರದಾರರ ನಾಟ್ಯಕಲೋಪಾಸನೆಯ ಮಾತೆತ್ತಿದರೆ ಎಷ್ಟೋ ನಾಟಕಕಾರರಿಗಿಂತ ಇವರದು ತೀರ ಭಿನ್ನವಾದ ತಂತ್ರ ಎಂದು ಹೊಳೆಯುವದು. ರಂಗಸೂಚನೆ ಮೊದಲಿನ ನಾಟಕಗಳಲ್ಲಿ ಎಷ್ಟು ಬೇಕು ಅಷ್ಟಿದ್ದರೂ, ಇವರ ನಾಟಕಗಳಲ್ಲಿ ಮಾತ್ರ ಪಾತ್ರಕ್ಕೆ ಸನ್ನಿವೇಶಕ್ಕೆ ಇರುವಷ್ಟು ಔಚಿತ್ಯ ರಂಗಸೂಚನೆಗೂ ಇದೆ. ಸ್ಕ್ಯಾಂಡಿನೇವ್ಹಿಯಾದ ನಾಟಕಕಾರನಾದ ಇಬ್ಸೆನ್, ಆಯರಿಶ್ ನಾಟಕಕಾರರಾದ ಶಾರ ರೀತಿಯನ್ನು ಇದು ನೆನಪಿಗೆ ತರಲು ಸಾಕು. ಶಾರಂತೆ ಆಚಾರ್ಯರು ಕ್ರಾಂತಿಯ ಕಿಡಿಗಳನ್ನು ಎಬ್ಬಿಸಿದರೂ, ಸಮಾಜದ ರೋಗಗಳಿಗಾಗಿ ಉಪಾಯ ಹೇಳಿ ಆಹ್ವಾನ ಕೊಡುವವರಲ್ಲ. ಇಬ್ಸೆನ್ ಗ್ಯಾಲ್ಸವರ್ದಿ—ಕೈಲಾಸಂ-ಕಾರಂತರಂತೆ ಇದುವೆ ನಮ್ಮ ಸಮಾಜ. ಇದುವೆ ಅದರ ಗತಿ, ಅಧೋಗತಿ ಎಂದು ಕನ್ನಡಿ ಹಿಡಿದು ಕೆಲಮಟ್ಟಿಗೆ ಅತಿಶಯೋಕ್ತಿಯ ಬಣ್ಣ ಬೆರಿಸಿ ರಸಿಕ ಕುಲ ರಂಜಿಸುವರು. ಈ ವ್ಯಂಗ್ಯರೀತಿಯಿಂದಲೇ ಸಮಾಜವೆಂಬ ಜೀವಿಯ ರೋಗಕ್ಕಾಗಿ ಶಸ್ತ್ರಕ್ರಿಯೆಯ ಮಾರ್ಗವು ತಾನಾಗಿ ಸೂಚಿತವಾಗುವುದು. ಇರಲಿ. ಇವರ ನಾಟಕಗಳೆಂದರೆ ಚಿಕ್ಕ ಮಾದರಿಯ ಜಗತ್ತೆ! ವಾಸ್ತವತೆಯ ಈ ರಂಗಭೂಮಿಯಲ್ಲಿ ಕಾಲಿಡದವರಾರು? ನಿರುದ್ಯೋಗಿ ಯುವಕರು, ಅಜ್ಞಾನಿ ಹೆಂಗಸರು, ಸಮಾಜದ ಹೊಣೆಯಿಲ್ಲದ ಮುಂದಾಳುಗಳಾದ (?) ಉತ್ತರ ಕುಮಾರರು, ಅನವಶ್ಯಕ ವಿದ್ಯೆಯ ಪ್ರಸಾರಕರಾದ ಕೆಲ ಶಿಕ್ಷಕರು, ಧರ್ಮದ ಹೆಸರಿನಲ್ಲಿ ಅನ್ಯಾಯ ಮಾಡುವ ಕೆಲ ಮಠಾಧಿಕಾರಿಗಳು, ಪ್ರಗತಿಯ ಮಾರ್ಗಕ್ಕಾಗಿ ಹಾತೊರೆದು ಕಾಲ್ತೊಡಕು

ಮಾಡಿಕೊಂಡ ಗತಿಗೆಟ್ಟ ಯುವಕರು, ಕಲೋಪಾಸಕರು, ನಮ್ಮ ತಾಯ್ನುಡಿಯ ಇಂದಿನ ಅಭಿಮಾನಶೂನ್ಯತೆ, ಲಲಿತಕಲೆಗಳ ಬೃಹನ್ನಳಾವಸ್ಥೆ, ಹಳ್ಳಿಯ ಹೀನ ಸ್ಥಿತಿ--ಒಂದೇ ಎರಡೇ—ವಿಶ್ವಸಾಹಿತ್ಯವೇ ಅಲ್ಲಿ ಥಳಥಳಿಸುತ್ತಿದೆ. ಸಂಧ್ಯಾಕಾಲ ನಾಟಕವಂತೂ-- ನಕ್ಷತ್ರಗಳಂತೆ ಮಿನುಗುವ ಹಾಸ್ಯ ತುಷಾರಗಳು, ವಿದ್ಯಾವಂತರನ್ನೂ ಬೆಕ್ಕಸಗೊಳಿಸುವ ಕವಡುಗಂಟಕ ಶಬ್ದಗಳ ತಿರುವುಮುರುವಿನ ಜಾಣ್ಮೆ, ವಾಸ್ತವ ಪಾತ್ರಗಳ ಸೃಷ್ಟಿಯಿಂದ—ಕಲೆಯ ಮೇರುಮಣಿಯಾಗಿದೆ.

ಇಂತಹ ನಾಟ್ಯಕಲೆಯ ಉಪಾಸನೆಯನ್ನು ಕ್ಷಣಕಾಲ ಮರೆತರೂ ಜಾಗೀರದಾರರ ಕಾದಂಬರಿಗಳಾದ ' ವಿಶ್ವಾಮಿತ್ರನ ಸೃಷ್ಟಿ 'ಯಲ್ಲಾಗಲಿ ಇಲ್ಲವೆ ಕಮಾಲಪಾಶನ ಜೀವನ ಚರಿತೆಯಲ್ಲಾಗಲಿ ಅಪೂರ್ವ ಹೊಸತನವೇ ಹಣಿಕಿಕ್ಕುವದು. 'ವಿಶ್ವಾಮಿತ್ರನ-ಸೃಷ್ಟಿ' ಯಲ್ಲಿ ಪದವೀಧರ ಯುವಕನೊಬ್ಬನ ನಿರುದ್ಯೋಗ ಸಮಸ್ಯೆ ಹಾಗೂ ಇಂದಿನ ವಿಶ್ವವಿದ್ಯಾಲಯಗಳಲ್ಲಿಯ ಕುಂದು ಕೊರತೆಗಳನ್ನು ನಿರ್ದಾಕ್ಷಿಣ್ಯವಾಗಿ ಬಯಲಿಗೆಳೆದಿದ್ದರೆ ' ತರುಣ ತುರ್ಕಸ್ತಾನ ' ದಲ್ಲಿ ಒಬ್ಬ ಆದರ್ಶ ಜೀವಿಯ ರಸವತ್ತಾದ ಹೋರಾಟದ ಚಿತ್ರವಿದೆ. ಒಂದು ಕಲಾಕೃತಿಯಲ್ಲಿಯ ನಾಯಕನು ತ್ರಿಶಂಕುವಿನಂತಾಗಿದ್ದರೆ ಇನ್ನೊಂದರಲ್ಲಿ ಕಮಾಲನು ಪರಿಪೂರ್ಣಾವಸ್ಥೆಯಲ್ಲಿರುವ. ಇಬ್ಬರ ಹೋರಾಟದಲ್ಲಿಯೂ ಸಾಮಾಜಿಕ ತೊಡಕುಗಳು, ಜನರ ಸ್ವಹೀನತಾಭಾವನೆ, ಸ್ವಾತಂತ್ರ್ಯವೆಂದರೇನು ? ಸಂಸ್ಕೃತಿ ಹುದುಗಿರುವುದೆಲ್ಲಿ ?—ಇವೇ ಮೊದಲಾದ ಸಮಸ್ಯೆಗಳು ತಲೆ ಎತ್ತಿವೆ. ಆದರೂ ' ವಿಶ್ವಾಮಿತ್ರನ ಸೃಷ್ಟಿ 'ಯಲ್ಲಿಯ ನಾಯಕನಿಗಿಂತ ಎಷ್ಟೋ ಮುಂದೆ ಕಮಾಲನು ಅಡಿಯಿಟ್ಟು ಗೆಲುವಿನ ಕ್ಷಿತಿಜದ ವರೆಗೆ ನೆಟ್ಟ ನೋಟವಿರಿಸಿದ್ದಾನೆ. ಜನರಲ್ಲಿಯ ತಪ್ಪು ಕಲ್ಪನೆ, ಮೂಢರೂಢಿ, ಆಚಾರ ವಿಚಾರ, ವೇಷ-ಭೂಷ-ಭಾಷೆ-ಶಿಕ್ಷಣ ಕ್ರಮದಲ್ಲಿ ಕ್ರಾಂತಿಯನ್ನುಂಟು ಮಾಡಿ ಸ್ವಾತಂತ್ರ್ಯದ ಹೊಸ ಕಹಳೆಯನ್ನು ಮೊಳಗಿಸಿದ ಶ್ರೇಯಸ್ಸು ಕಮಾಲನದೇ. ಹೀಗೆ ಎರಡೂ ಕಾದಂಬರಿಗಳಲ್ಲಿ ವಿಷಯದ ವೈವಿಧ್ಯ ಆವಿತುಕೊಂಡಿದ್ದರೂ, ವಿಷಯ ನಿರೂಪಣೆಯಲ್ಲಿ, ಪಾತ್ರ ನಿರ್ಮಿತಿಯಲ್ಲಿ ಶ್ರೀರಂಗರ ಸ್ವತಂತ್ರಮನೋವೃತ್ತಿ, ಎದೆಗಾರಿಕೆ, ಸೂಕ್ಷ್ಮ ನಿರೀಕ್ಷಣಾಶಕ್ತಿಯನ್ನು ಸಹೃದಯ ಓದುಗನು ಹಗಲಿನಲ್ಲಿಯ ಸೂರ್ಯನಷ್ಟು

ಸಹಜವಾಗಿ ಕಂಡುಕೊಳ್ಳಬಹುದು. ಇದೀಗ ಉಳಿದ ಕಾದಂಬರಿಕಾರರ ಕಲ್ಪನಾ ಪರಂಪರೆಗೂ ಶ್ರೀರಂಗರ ಕಲಾವಿಲಾಸಕ್ಕೂ ಭೇದ. ಪಾತ್ರಪೋಷಣೆಯಲ್ಲಿ ಸಮರಸವಾಗಿ ತಮ್ಮ ಸಾಹಸೀಜೀವನವನ್ನೇ ಸಾಂದರ್ಭಿಕವಾಗಿ ಕಲಾಮಯವಾಗಿ ರೂಹಿಸಿರುವದು ಇಲ್ಲಿಯ ಮೇಲ್ಮೆ.

ಪದ್ಯದಲ್ಲಿ ಬೇಂದ್ರೆ, ಮುಗಳಿ, ಆನಂದಕಂದ, ಸಾಲಿ, ಪುಟ್ಟಪ್ಪರಂತಹರಲ್ಲಿ ಯಾರೊಬ್ಬರಿಗೆ ಮೇಲಿನ ಸ್ಥಾನ ಮೊದಲಿನ ಮಾನ ದೊರೆತರೆ, ಗದ್ಯದಲ್ಲಿ ಕಾರಂತ, ಆಲೂರ, ದೇವುಡು, ಶ್ರೀನಿವಾಸ, ಅ. ನ. ಕೃ ರಂತೆ ಶ್ರೀರಂಗರಿಗೂ ಮೇಲಿನ ಮಟ್ಟವಿದೆ. ಅಲ್ಲದೇ ಕನ್ನಡದ ಪ್ರೋಜಲಾರೆಟ್ ಎಂಬ ಅಂಕಿತವೂ ಎಂದೂ ಯಥಾರ್ಥವೆ. ಯಾವ ಬಗೆಯಿಂದಲೂ ಸರಕಿನ ಬೆಲೆ ಏರಿಸಿ ಹೇಳದೆವೆಂಬ ಸುಳ್ಳುಸುಖವು ಈ ಮಾತಿನಲ್ಲಿಲ್ಲ. ಅಷ್ಟೊಂದು ಆಚಾರ್ಯರ ಶೈಲಿ ಓಜಸ್ವಿ, ಗ್ರಂಥಗಳು ವಿದ್ವತ್ಪೂರ್ಣ, ಅಭ್ಯಾಸವು ಆಳ.

ಇಂತು ಸಹೃದಯ ವಿಮರ್ಶಕನಿಗೆ ಶ್ರೀರಂಗರ ಕಲಾಕೃತಿಗಳ ಬಗ್ಗೆ ಸಹಾನುಭೂತಿ, ಶ್ರೇಷ್ಠತೆಯ ಕಲ್ಪನೆಗಳುಂಟಾದರೂ ಅವರ ಕೃತಿಗಳನ್ನು ಕೈಯಲ್ಲಿ ತೆಗೆದುಕೊಂಡಾಕ್ಷಣ ವಿಚಿತ್ರ ಅಭಿಪ್ರಾಯ ತಳೆಯುವವರಿಗೂ ಕಡಿಮೆಯಿಲ್ಲ. ' ಹರಟೆಗಳಲ್ಲಿ ಶಬ್ದಾಡಂಬರವಿದೆ; ಪಾತ್ರಗಳು ಬಹುಕಾಲ ಮನಹಿಡಿಯುವಂತಹವಲ್ಲ; ವಸ್ತುಸಂವಿಧಾನದಲ್ಲಿ ಅಸ್ವಾಭಿವಿಕತೆಯುಂಟು; ಹಾಸ್ಯವು ಬಹಳ ಕಟುವಾದುದು; ವಿಷಯ ನಿರೂಪಣೆಯಲ್ಲಿ ರಸಾಭಾವವಿದೆ; ಶಬ್ದಛಲವು ಹೆಚ್ಚು; ಆಚಾರ್ಯರಿಗೆ ದೇವತ್ವದಲ್ಲಿ ಶ್ರದ್ಧೆ ಕಡಿಮೆ; ಶ್ರೀರಂಗರೂ ಕವನಗಳನ್ನು ಬರೆಯುವರೇ ?— ' ಎಂದು ಆಕ್ಷೇಪಗಳನ್ನೆತ್ತುವವರು ಉಂಟು. ಮುಖ್ಯವಾಗಿ ಅವರ ಲೇಖನಗಳು ಶಬ್ದಾಡಂಬರದಿಂದ ವಿಕೃತವಾಗಿಲ್ಲವೆಂದೂ, ಅದೊಂದು ಕೇವಲ ರಂಜನೆಯಸಾಧನವೆಂದೂ ತಾಳ್ಮೆಯಿದ್ದವನು ತಿಳಿಯಬಹುದು. ಪಾತ್ರಗಳ ಮಾತು. ಎಲ್ಲವೂ ಅನಂತಕಾಲದವರೆಗೆ ಬಾಳಬೇಕೆಂಬ ಧ್ಯೇಯವನ್ನು ಕಲಾವಿದನು ಯಾವಾಗಲೂ ತಳೆಯಬಹುದೇ ? ನಮ್ಮ ಸಮಾಜ ಜೀವನವನ್ನು ಕಲೆಯಕುಂಚದಿಂದ ಪ್ರಾಮಾಣಿಕ ರೀತಿಯಲ್ಲಿ ಚಿತ್ರಿಸುವವನಿಗೆ ಕಾಲಮಾನದ ಪ್ರಶ್ನೆ ಇದ್ದೇ ಇದೆ. ಕೆಲವು ಪಾತ್ರಗಳು ಮಾತ್ರ ಅನಂತಕಾಲದವರೆಗೆ ಬಾಳಬಹುದು. ಆಹುದು. ಸಮಾಜದ ರೋಗವು ಗುಣಹೊಂದಬೇಕಾದರೆ ಚುಚ್ಚುಮದ್ದೇ ಬೇಕಲ್ಲವೇ ?

ಹಾಗೆ ತಿದ್ದು ಪಾಟಿಗೆ ಕಟು ಅಥವಾ ವ್ಯಂಗ್ಯರೀತಿಯೇ ಅವಶ್ಯ. ಇನ್ನು ದೇವ ತ್ವವು ಹೃದಯದ ಪ್ರಶ್ನೆ. ಅವರ ಊಹಾಪ್ರೋಹಕ್ಕೆಂದು ಓದುಗನು ಬರೀ ಅವರ ಕೆಲವು ನುಡಿಗಳಿಂದ, ಸಂದಿಗ್ಧವಾದ ಅವತರಣಿಕೆಗಳಿಂದ ಅಪಾರ್ಥ ಮಾಡಿಕೊಳ್ಳಲಾಗದು. ಶ್ರೀರಂಗರೂ ಕವನ ಬರೆಯುವರೇ ? ಅವರ ಲೇಖ ನಗಳಲ್ಲಿ ರಸವಿದೆಯೇ ? ಎಂಬ ಪ್ರಶ್ನೆ ಕೇಳುವವರಿಗೆ ಕಾವ್ಯದ ಬಗ್ಗೆ ತಪ್ಪು ಕಲ್ಪನೆಯಾಗಿರಲೇ ಬೇಕು. ಕಾವ್ಯವೆಂದರೆ ಹಲವರ ಸೊತ್ತು. ರಸವತ್ತಾದ ಗದ್ಯ ಬರೆಯಬಲ್ಲವನಿಗೆ ಸ್ಫೂರ್ತಿ, ಭಾವ ಭಾಷೆಗಳ ಸಂಮಿಲನ,ಪದಲಾಲಿತ್ಯ ತಲ್ಲೀನತೆ, ಎಲ್ಲಿಂದ ಬರಬೇಕೆಂದು ಕೇಳುವದು ಶುದ್ಧ ತಪ್ಪು. ಶ್ರೀರಂಗರ ಕವನ ಅಣಕುವಾಡಗಳನ್ನು ಮೇಲಿನಂತೆ ನಿಜವಾದ ಕಾವ್ಯದ ಲಕ್ಷಣಗಳ ಅಳತೆಗೋಲಿನಿಂದ ಅಳೆದು ನೋಡಿದರೆ ಈ ಬಗೆಯ ಅಪಾರ್ಥಕ್ಕೆ ಅವಕಾಶ ವಿರದು.

ಕೊನೆಗೆ ಇಷ್ಟೆಲ್ಲ ಆಕ್ಷೇಪಗಳ ಪ್ರತ್ಯುತ್ತರಗಳೊಡನೆ ಶ್ರೀರಂಗರ ಕಾರ್ಯ ರಂಗವನ್ನು ಸಹೃದಯತೆಯಿಂದ ಅವಲೋಕಿಸಿದರೆ, ಅವರಿಂದ ನಿಜವಾಗಿಯೂ ಕನ್ನಡದ ಏಳ್ಗೆಯಾಗಿಯೇ ತೀರಿದೆ ಎಂದು ರಸಿಕರ ಹೃದಯಾಂತರಾಳದಿಂದ ಇನಿದನಿಯೊಂದು ಹೊರಹೊಮ್ಮುವದು. ಆಗ ಈ ಅನುಪಮ ವ್ಯಕ್ತಿಯ— ಮಿರಮಿರಿ ಮಿಂಚುವ ಕಣ್ಣುಗಳು, ಸಾಮಾನ್ಯವಾಗಿ ಕೆದರಿದಂತೆ ಕಾಣುವ ತಲೆಗೂದಲು, ಆಡಂಬರವಿಲ್ಲದ ಆಂಗ್ಲ ಉಡಿಗೆ, ನಸುಬಾಗಿಬಾಗದ ಬೆನ್ನು, ಹರವಾದ ಕಾಂತಿಯುತ ಹಣೆ, ನೆಟ್ಟ ನೋಟ, ಪ್ರತಿಭಾವಂತರ ವಿಷಯದಲ್ಲಿ ಸಹಜವಾಗಿ ಗೌರವವಿದ್ದರೂ ಸ್ವಾಭಿಮಾನಯುಕ್ತ ನಡಿಗೆ, ತೂಕದ ನಾಟ ಕೀಯ ಮಾತು, ಎಲೆಯಡಕೆಯಿಂದ ಕೆಂಪು ಹೊಡೆಯುವ ತುಟಿ, ನಸು ಗೆಂಪು ಮುಖ, ಗೊಗ್ಗರವೆನಿಸುವ ದನಿ— ಮೊದಲಾದ ವೈಶಿಷ್ಟ್ಯಗಳ ನಿಕಟ ಪರಿಚಯವನ್ನು ಮರೆಯುವದು ಹೇಗೆ ತಾನೇ ಸಾಧ್ಯ ?

---

## ಸಾಲಿ ರಾಮಚಂದ್ರರಾಯರು

ಮೈಯ್ಯಲ್ಲೊಂದು ಬಿಳಿ ಖಾದಿ ಶರ್ಟು, ಚಿಕ್ಕ ಧೋತರ, ತಲೆಯ ಮೇಲೆ ಶುಭ್ರ ಟೊಪ್ಪಿಗೆ, ಕೈಯಲ್ಲಿ ಕೋಲು. ಒಮ್ಮೊಮ್ಮೆ ಮೈಮೇಲೆ ಕೋಟು ಇದ್ದರೆ ಇದ್ದಿತು. ಇಲ್ಲದಿದ್ದರೆ ಇಲ್ಲ. ಕೊನೆಗೆ ಏನಿದ್ದು ಏನಿಲ್ಲದಿದ್ದರೂ ಎನ್ನುವಷ್ಟು ಸರಲತೆಯ ಪ್ರಶ್ನೆ ತಲೆದೋರಿದರೂ ಸಂಗೀತಜ್ಞನಿಗೊಪ್ಪುವ ಗುಣು ಗುಣ ಧ್ವನಿ ಇದೆ. ಮನಸ್ಥೈರ್ಯಕ್ಕಾಗಿ ಒಂದೆಡೆ ಚೆಲ್ಲಿದ ಕತ್ತು. ಉತ್ತರ ಕರ್ನಾಟಕದ ಹವೆ ನೀರು ನಡೆನುಡಿಗಳನ್ನು ಮೈಗೂಡಿಸಿಕೊಂಡಿದ್ದರೂ ಮೈಸೂರಿನ ಮಾತಿನ ಮಾರ್ದವ,ಅಚ್ಚುಕಟ್ಟುತನ, ಮುಗುಳುನಗೆಗೆ ಏನೂ ಕೊರತೆ ಇಲ್ಲ. ' ಹಿಂದಿನದಂತೂ ಹೇಗೊ ಆಯಿತು; ಇಂದಿನದು ಹೀಗೆ, ಇನ್ನು ಮುಂದಿನದು ಹೇಗಯ್ಯ ? ಎಂದು ಗೋಳಿಡುವ ತ್ರಿಕಾಲಜ್ಞಾನವಿಲ್ಲದವರ ಜಾತಿ ಸಾಲಿಯವರದಲ್ಲ '--ಎಂದು ಹೆಸರಾಂತ ವಿಮರ್ಶಕನೊಬ್ಬನ ನುಡಿ ಓದಿದಾಗಿನಿಂದಲೂ ನನಗೆ ಸಾಲಿಯವರ ಬಗೆಗೆ ಆತ್ಮೀಯತೆ ಹೆಚ್ಚಿತು. ಅವರ ಜೀವನವನ್ನು ಸೂಕ್ಷ್ಮವಾಗಿ ಪರಕಿಸುವ ಕಲ್ಪನೆಗೂ ಅಂದೇ ಕೊನರೊಡೆಯಿತು.

ತಮ್ಮ ಸದಸದ್ವಿವೇಕಬುದ್ಧಿಗೆ ಸರಿ ಎಂದು ತೋರಿದರೆ ಹಾಗೂ ನ್ಯಾಯಕ್ಕಾಗಿ ಹೋರಾಡುವೆವೆಂಬ ಆತ್ಮವಿಶ್ವಾಸವು ತಮಗಿದ್ದರೆ—ಎಂದೂ ಹಿಂತೆಗೆಯುವ ಅಳ್ಳೆದೆ ಸಾಲಿಯವರಿಗಿಲ್ಲ. ' I shall be as harsh as truth and as uncompromising as justice ' ಎಂಬ ಮಹಾತ್ಮಾಜಿಯವರ ಉಕ್ತಿಯನ್ನು ಶ್ರೀಯುತರು ಜೀವಿತದ ಧ್ಯೇಯವಾಗಿಟ್ಟುಕೊಂಡಂತಿದೆ. ಇಂತಹ ಸಾಧಕರು ಒಮ್ಮೊಮ್ಮೆ ಜನಸಾಮಾನ್ಯರಿಗೆ ಶತ್ರುಗಳಾಗುವ ಸಂಭವವೂ ಹೆಚ್ಚು. ಹೇಗಿದ್ದರೂ ರಾಮಚಂದ್ರರಾಯರಿಗೆ ಧರ್ಮಸಹಿಷ್ಣುತೆ ಕಡಿಮೆ ಇಲ್ಲ. ಮಾತಿನಲ್ಲಿಯೂ ಎಂತಹ ನಯ ವಿನಯ !

ನಿವೃತ್ತರಾದಾಗಲೂ ದುಡಿಯುವ ಅವಶ್ಯಕತೆ ಇಲ್ಲದಷ್ಟು ವ್ಯವಸ್ಥೆ ಇದ್ದರೂ ನಿರರ್ಥಕ ಕಾಲಕ್ಷೇಪವೇಕೆ ಎಂದು ಯಾವಾಗಲೂ ಬುದ್ಧಿಯ

ಹಸಿವಿಗೆ ಆಹಾರ ಪೂರೈಸುವದು ಸಾಲಿಯುವರಿಗೆ ರಕ್ತಗತ. ಅಂತೇ ಈ ಇಳಿ ವಯಸ್ಸಿನಲ್ಲಿಯೂ ಪಾಲಿ, ಅರ್ಧಮಾಗಧಿ, ಭಾಷೆಗಳಲ್ಲಿ ತಜ್ಞರಾಗುವ ಮಹತ್ವಾಕಾಂಕ್ಷೆ ಅವರಿಗೆ. ರಶಿಯಾ ದೇಶದ ಆದರ್ಶಮೂರ್ತಿಯಾದ ಟಾಲಸ್ಟಾಯಿಯವರ ಕತೆಗಳ ಸವಿಯೂಟವನ್ನು ರಸಿಕ ಕನ್ನಡಿಗರಿಗೆ ಬಡಿಸಬೇಕೆಂದು ಅವರ ಮನೀಷೆ. ಸಂಸ್ಕೃತವು ಅವರ ಮನೆತನದ ಹೆಮ್ಮೆಯ ವಿಷಯ. ಸಾಲಿಯವರ ನಿತ್ಯದ ಉಸಿರು. ಕವಿಕುಲಗುರುವಿನ ಮೇಘದೂತಕ್ಕೆ ಇತ್ತೀಚಿಗೆ ಪ್ರಾಂಜಲಬುದ್ಧಿಯಿಂದ ಆತ್ಮಾರ್ಪಣೆಮಾಡಿದ್ದು ಅದಕ್ಕಾಗಿಯೇ! ಜೀವನದಲ್ಲಿಯ ನಿರಾಸೆ. ಸಾಕ್ಷ್ಯವಿಪ್ಲಷ್ಟಾದರೂ ಮರೆಯಲಿತ್ತಿಸಲು ಸಾಹಿತ್ಯೋದ್ಯಾನದಲ್ಲಿ ಅಡಿ ಇಟ್ಟ ಅಸಂಖ್ಯ ಮಹಾನುಭಾವರಲ್ಲಿ ಸಾಲಿಯವರೊಬ್ಬರು. ರಾಷ್ಟ್ರಸೇವೆಯೊಂದು ಓಂನೇ ವಯಸ್ಸಿನಲ್ಲಿಯೂ ಸೂತ್ರ ಸೇವಾಸಂಘದ ಸಂಘಟನೆಯಲ್ಲಿ ಮನಸ್ಸು ಹಾಕಿದ್ದಾರೆ.

ಸಮಾಜದಲ್ಲಿಯ ಅನ್ಯಾಯವನ್ನಾಗಲಿ ಇಲ್ಲವೆ ಆದರ ಪ್ರಮುಖ ಅಂಗವಾದ ಸಭೆಗಳಲ್ಲಿ ರಸಭಂಗವನ್ನಾಗಲಿ ಸಾಲಿಯವರು ಎಂದೂ ನೋಡಿ ನೋಡಿ ಸಹಿಸಿಕೊಂಡಿರುವವರಲ್ಲ. ನಿಷ್ಠುರರಾದರೂ ಚಿಂತೆ ಇಲ್ಲ—ಶಾಂತತೆ, ಔಚಿತ್ಯವರಿತು ವಿವೇಕದಿಂದ ವರ್ತಿಸಿರೆಂದು ಮನ ಒಲಿಸುವ ಸರಣಿಯಲ್ಲಿ ಅವರು ಜನರಿಗೆ ತಿಳಿಹೇಳುವರು. ಎಲ್ಲಿಯಾದರೂ ಗೇಣು ಹೊಟ್ಟೆಯ ಪಾಡಿಗಾಗಿ ದುಡಿಯುತ್ತಿರಲಿ, ನಮ್ಮ ಜೀವನದ ಉದಾತ್ತತತ್ವ, ಸ್ವತಂತ್ರ ವಿಚಾರಸರಣಿ, ನಾಡುನುಡಿಯ ಕನವರಿಕೆ, ವ್ಯಕ್ತಿತ್ವ—ಮೊದಲಾದವುಗಳನ್ನು ಲೋಗರಂತೆ ಬಿಟ್ಟು ಬಿಡತಕ್ಕದ್ದಲ್ಲವೆಂದು ಬೋಧಿಸುವ ರಾಮಚಂದ್ರರಾಯರೂ ಎಲ್ಲರ ಆದರಕ್ಕೆ ಪಾತ್ರರೇ ಎಂಬಲ್ಲಿ ಸಂಶಯವೇನು?

ಕಾಲಕಾಲಕ್ಕೆ ತಕ್ಕಂತೆ ನಮ್ಮ ವಿಚಾರಗಳನ್ನು ಸುವ್ಯಸ್ಥಿತಗೊಳಿಸಿ ಸ್ವಾರ್ಥತ್ಯಾಗಕ್ಕೆ ಸಿದ್ಧರಾಗಬೇಕೆಂದು ಸಾಲಿಯವರ ಮತ. ನಾಳಿನ ನನ್ನ ಗತಿ ಏನು? ಎಂದು ಗೋಳಾಡುತ್ತ ಬಡವನೊಬ್ಬನ ನಿರ್ಗತಿಕತನವನ್ನು ಇಂದು ಕಣ್ಣಾರೆ ನೋಡುತ್ತ ಕೂಡ್ರುವಂತಹ ಕಲ್ಲೆದೆ ಅವರದಲ್ಲ. 'ನಾಳೆ ಎಂಬೆಯೊ ನಾಳೆ ಸೇರುವದು ನೂರ್ಕೋಟಿ ನಿನ್ನೆಗಳ ಜೊತೆಗೆ' ಎಂಬ ಪಂಗಡಕ್ಕೆ ಒಳಪಟ್ಟವರು. ಹೆರವರಿಗಾಗಿ ಕಣ್ಣೀರಿಟ್ಟು ಸಹಾಯಸಲ್ಲಿಸುವ ಬುದ್ಧಿಯು ಇವರಲ್ಲಿ ಮನೆ ಮಾಡಿರುವದೇಕೆ ಎಂಬ ಪ್ರಶ್ನೆಗೆ ಉತ್ತರ

ಸುಲಭವಾಗಿ ದೊರೆಯುವುದು. ಸಾಲಿಯವರ ಜೀವನವು ಬಾಲ್ಯಾವಸ್ಥೆಯಲ್ಲಿ ಎಷ್ಟೂ ಸುಗಮವಾಗಿದ್ದಿಲ್ಲ. ತೀರ ಚಿಕ್ಕವರಿರುವಾಗಲೇ ತಾಯಿ ತಂದೆಗಳಿಂದುಂಟಾಗಬಹುದಾದ ಸುಖ ಮಣ್ಣುಗೂಡಿತು. ಹೆರವರಲ್ಲಿ ಊಟಮಾಡಿ ಅವರ ಇದ್ದಬಿದ್ದ ಕೆಲಸಮಾಡಿ ಅಧ್ಯಯನ ಸಾಗಿಸಿ ಪ್ರೌಢ ಶಿಕ್ಷಣ ಕ್ರಮದಲ್ಲಿ ಸೈ ಎನಿಸಿಕೊಂಡರು. ಮ್ಯಾಟ್ರಿಕ್ ಪರೀಕ್ಷೆಯ ಶಂಕರಸೇಟ್ ಶಿಷ್ಯವೃತ್ತಿಯು ತೀರ ಕೆಲವು ಗುಣಗಳದೃಷ್ಟಿಯಿಂದ ಅವರಿಗೆ ಸಿಗದಾಯಿತು. ಮುಂದೆ ಬಿ.ಎ. ಆಗಿ ರಾಷ್ಟ್ರೀಯ ವೃತ್ತಿ ಬೆಳಿಸಿಕೊಂಡು ಜನತಾಜನಾರ್ದನನ ಸೇವೆಯ ದೃಷ್ಟಿಯಿಂದ ಶಿಕ್ಷಕವೃತ್ತಿ ಕೈಕೊಂಡರು. ಸಂಸಾರದಲ್ಲಿ ಆಗಾಗ ಒಂದೊಂದೇ ಆಪತ್ತು ತಲೆದೋರಲಾರಂಭಿಸಿದವು. ಮೊದಲು ಇನಿಯಳು ಸಾವಿಗೆ ತುತ್ತಾದಳು. ಬೆಳಿವ ಮಕ್ಕಳ ಮೊಗ ನೋಡಿ ಈ ದುರ್ಘಟ ಪ್ರಸಂಗವನ್ನು ರಾಮಚಂದ್ರರಾಯರು ಮರೆತರು. ಮುಂದೆ ಕೆಲವರ್ಷಗಳಲ್ಲಿ ಕಾಲೇಜಿನಲ್ಲಿ ಓದುತ್ತಿರುವ ವಯಸ್ಸಿಗೆ ಬಂದ ಮಗನು ಕಾಲವಾದನು. ಇಂತಹ ಚಿಕ್ಕ ವಯಸ್ಸಿನಲ್ಲಿಯೇ ಶ್ರೀಕೃಷ್ಣನು ಅಸಹಕಾರಚಳವಳಿಯಲ್ಲಿ ಭಾಗವಹಿಸಿದ್ದನು. ಕಾಲೇಜ್ ಯು. ಟಿ. ಸಿ ಯಂತಹ ದೈಹಿಕ ಚಟುವಟಿಕೆಯ ಕಾರ್ಯ ರಂಗದಲ್ಲಿಯೂ ಅಭ್ಯಾಸದಲ್ಲಿಯೂ ಅವನು ಮುಂದುವರಿದಿದ್ದನು. ನಿಜವಾಗಿಯೂ ಪುತ್ರವಿಯೋಗ ಸಾಲಿಯವರ ಸಂತಾಪ ಹೆಚ್ಚಿಸಿತು. ಕೆಲಕಾಲ ಜೀವನದ ಆಸೆ ಆಕಾಂಕ್ಷೆ ಮಾಯವಾದವು. ಎತ್ತ ನೋಡಿದತ್ತ ಅವರಿಗೆ ಕಾರಿರುಳು. ಆದರೂ ವಿರಸ ಕಾಲದಲ್ಲಿಯೇ ರಸಮಯವಾದ ತಿಲಾಂಜಲಿ ಎಂಬ ಅಶ್ರುಗೀತೆ ಹೊರಹೊಮ್ಮಿತು.

ಸುಖದಲ್ಲಿಯೂ ದುಃಖದಲ್ಲಿಯೂ ಸಾಲಿಯವರಿಗೆ ಮನತುಂಬಮಕ್ಕಳು ಬೇಕು. ಒಬ್ಬಂಟಿಗರಾಗಿರುವುದೆಂದರೆ ಅವರಿಗೆ ಮೆಚ್ಚುಗೆ ಇಲ್ಲ. ಬಂಧುಬಳಗದವರ, ಗೆಳೆಯರ ನಗೆಯ ಕಾರಂಜಿ ಶ್ರೀಯುತರ ಕಣ್ಣಿಗೆ ಚಿರ ನೂತನವಾದ ಹಬ್ಬ, ಮನಕೆ ಸೊದೆ, ಕಿವಿಗೆ ಸಂತರ್ಪಣೆ!

'ಶಿಕ್ಷಕರೆಂದರೆ' ಕುರಿಕಾಯ್ದಂತೆ ವಿದ್ಯಾರ್ಥಿಗಳನ್ನು ಕಾಯುವ ಅವ್ಯವಸ್ಥಿತ ವಿಚಾರಗಳ ಮೊಟ್ಟೆ ಎಂಬ ಕುತ್ಸಿತ ಕಲ್ಪನೆ ಸಾಲಿಯವರ ಪ್ರಶ್ನೆ ಬಂದಾಗ ಬಯಲಾಗುವದು. ಸಂಘಟನೆ, ಸಮಾಜ ಸೇವೆಯ ಹೊಣೆ, ನಾಗರಿಕತೆ, ಇವೇ ಆದರ್ಶತ್ರಯಗಳು ವಿದ್ಯಾರ್ಥಿಗಳಲ್ಲಿ ನೆಲೆಯೂರುವಂತೆ

ಆದರ್ಶವಾದಿಗಳಾದ ಸಾಲಿಯವರು ಯಾವ ವಿಷಯವನ್ನು ಯಾವ ವರ್ಗದಲ್ಲಿಯೇ ಕಲಿಸಲು ಪ್ರಾರಂಭಿಸಲಿ, ವಿದ್ಯಾರ್ಥಿಗಳಿಗೆ ವಿಷಯದ ಜ್ಞಾನ ವಾಗದ ಹೊರತು ಮುಂದೆ ಹೋಗುವವರಲ್ಲ. ಸಂಸ್ಕೃತ ವಿಷಯವಿದ್ದರಂತೂ ತೀರಿತು, ಶ್ರೀಯುತರು ವಿದ್ಯಾರ್ಥಿಗಳ ಕುತೂಹಲ ಕೆರಳಿಸುತ್ತಾ ಹಾಸ್ಯಲಹ ರಿಯಲ್ಲಿ ಅತಿ ಗಡುಚಾದ ವ್ಯಾಕರಣ ನಿಯಮಗಳನ್ನು, ಅಲಂಕಾರಗಳನ್ನು ಸಾಂದರ್ಭಿಕ ಸಂಗತಿಗಳನ್ನು ಮಾತಿನ ಔಚಿತ್ಯವನ್ನು ತನ್ಮಯರಾಗಿ ಹಾವ ಭಾವದೊಡನೆ ವ್ಯಕ್ತಗೊಳಿಸುವರು. ಕನ್ನಡವೇ ಆಗಲಿ ಆಂಗ್ಲ ಭಾಷೆಯಾ ಗಲಿ, ಸಂಸ್ಕೃತವೇ ಆಗಲಿ ಅಲ್ಲಿಯ ಕವನಗಳನ್ನು ಮಧುರ ಸ್ವರದಲ್ಲಿ ತಾನಾ ಗಿಯೇ ಅರ್ಥವು ಸ್ಪಷ್ಟವಾಗುವಂತೆ ಓದಿ ತೋರಿಸದಿದ್ದರೆ ಅವರ ಓದಿಗೇ ಕೊನೆಯಿಲ್ಲ. ಅಂತೆಯೇ ಶಾಲೆಯ ಮೇಲ್ವಿಚಾರಣೆಗೆಂದು ಬಂದ ಶಿಕ್ಷಣಾ ಧಿಕಾರಿಗಳೆಷ್ಟೋ ರಾಮಚಂದ್ರರಾಯರ ಕವನ ಕಲಿಸುವ ರೀತಿಗೆ, ಕಿನ್ನರಿ ಕಂಠಕ್ಕೆ, ಅಸಾಮಾನ್ಯಪಾಂಡಿತ್ಯಕ್ಕೆ ತಲೆದೂಗಿ ನಿಜವಾಗಿಯೂ ನಮಗೆ ಇಂದು ಸಾಹಿತ್ಯದರಸದೂಟ ಉಣಿಸಿದಂತಾಯಿತು—ಎಂದು ಉದ್ಗಾರ ತೆಗೆದುದನ್ನು ನಾನು ಸ್ವತಃ ಕೇಳಿದ್ದೇನೆ.

ಸಾಲಿಯವರ ಕಾವ್ಯ ಸೃಷ್ಟಿಯ ವೈಭವವು ಓದುಗನ ಮನವನ್ನು ಥಟ್ಟನೆ ಸೆಳೆಯುವದು. ಹಳಗನ್ನಡದಲ್ಲಿ ಹಾಸುಹೊಕ್ಕಾಗಿದ್ದರೂ ಅದರ ವೈವಿಧ್ಯ ಎಂತಹದು! ತಾಯಮಡಲಲ್ಲಿ, ಪ್ರಕೃತಿ ಗೀತೆಗಳು, ಇಂಚರ, ವೀಣೆಯ ತಂತಿ, ಮುದ್ದಣ, ರಾಮನಗುಳಿ, ಕೊಡಗು, ಬಿರುಗಾಳಿ, ತೀತಿ, ನೀರಗುಳ್ಳಿ, ಅಭಿಸಾರ, ತಿಲಾಂಜಲಿ, ಹೀಗೆ ನಮ್ಮ ಜೀವನದ ಸುತ್ತುಮುತ್ತ ಲಿನ ಸಮಸ್ಯೆಗಳ ದೃಶ್ಯಗಳ ಬಗೆಗೆ ಕವಿ ತನ್ನ ಭಾವನೆಗಳನ್ನು ಕಲಾಪೂರ್ಣ ವಾಗಿ ಚಿತ್ರಿಸಲೆಸಗಿದ್ದಾನೆ. ತಾಯ ಮಡಲಲ್ಲಿಯ ಗೀತೆಗಳನ್ನೋದುವಾಗ ನಮ್ಮ ಕರ್ನಾಟಕದ ಮಹಾಪುರುಷರ ವಿಷಯಕ್ಕಾಗಿ, ನಾಡಿನ ಉಜ್ವಲ ಇತಿಹಾಸಕ್ಕಾಗಿ ನಮ್ಮ ಅಂತಃಕರುಣ ತುಂಬಿ ಬರುವದು. ಮಹಾತ್ಮಾಜಿ ಯವರು ಭಾರತದ ಸಲುವಾಗಿ ಕಲ್ಪಿಸಿಕೊಟ್ಟ ಧ್ವಜದ ವೈಶಿಷ್ಟ್ಯ—ಹೆಚ್ಚಳ ಬಣ್ಣಿಸುವಾಗ ಯಾವ ಭಾರತೀಯನಿಗೆ ಅಭಿಮಾನವೆನಿಸಲಿಕ್ಕಿಲ್ಲ! ಕನ್ನಡ ನುಡಿಯ ಹಿರಿಮೆಯನ್ನು ಕವಿ ಮೈಮರೆತು ಹಾಡುವಾಗ—ಇಂದಿಗೂ ಪ್ರತಿ ಯೊಂದು ಸಭೆ ಸಮ್ಮೇಲನದ ಕಾರ್ಯಕ್ರಮದ ಮೊದಲು ಅಭಿಮಾನದಿಂದ

ಅನ್ನುವ ' ಉದಯವಾಗಲಿ ' ಎಂಬ ನಾಡಗೀತೆ ನೆನಪಾಗುವದು ಸಹಜ. ಆಂಗ್ಲ ಕವಿಪ್ರವರರಾದ ಶೆಲ್ಲಿ, ಕೀಟ್ಸರ ಕಾವ್ಯ ನಿರ್ಮಿತಿಯಲ್ಲಿ ಕಾಣುವ ಸುಂದರ ಶಬ್ದ ಚಿತ್ರ, ವಿಚಾರಗಳ ನಿರರ್ಗಳ ಹೊನಲು—ಸಾಲಿಯವರ ಪ್ರಕೃತಿ ಗೀತೆಗಳಲ್ಲಿ ಸ್ಫುಟವಾಗಿರುವವು. ಬಿರುಗಾಳಿ. ಶ್ರೀತಿ ಎಂಬ ಭಾವ ಗೀತೆಗಳು ನಿಸರ್ಗದ ರುದ್ರರೂಪ ರಮಣೀಯತೆಗಳನ್ನು ರೂಪಿಸುವವು. ಕುಶಲ ಚಿತ್ರಕಾರನ ಕಲಾಪೂರ್ಣ ರೇಖೆಗಳಂತಹ ಶಬ್ದರಚನೆ ಕಾಣಬೇಕಿದ್ದರೆ ' ಕೊಡಗು ' ಎಂಬ ಅವರ ಕವನವನ್ನು ಎಲ್ಲರೂ ಓದಿಯೇ ತೀರಬೇಕೆನಿಸುವದು.

ರಾಮಚಂದ್ರರಾಯರ ಕಲೋಪಾಸನೆಯು ಜೀವಾಳ ಅಭಿಸಾರ ತಿಲಾಂಜಲಿಗಳಲ್ಲಿ ಹುದುಗಿದೆ ಎಂದು ರಸಿಕರಿಗೆ ಬೇರೆ ಹೇಳುವ ಅವಶ್ಯಕತೆ ಇಲ್ಲ. ಅಭಿಸಾರವು—ವಿರೋಧ ಪರಿಸ್ಥಿತಿ, ಭಿನ್ನ ಸ್ವಭಾವದ ವ್ಯಕ್ತಿಗಳ ಸಂಯಮ ಶೃಂಗಾರ ನಿರೂಪಣೆಯ ಅದ್ಭುತ ಚಿತ್ರವಾಗಿದೆ. ವಾರಂಗನೆಯು ಏರುಂಜವ್ವನೆಯಾದಾಗ ಸೃಷ್ಟಿಯಲ್ಲಿ ವರ್ಷಾಕಾಲ ಅಡಿ ಇಟ್ಟಿದೆ. ಮರದಡಿಯಲಿ ಮಲಗಿದ ಮುನಿವರನನ್ನು ಮಲಗಲು ನನ್ನಯ ನಿಲಯಕೆ ಬಾರಾ ' ಎಂದು ಮೊದಲಾಗಿ ಔತಣವೀಯುವಾಗ ಆ ಅಭಿಸಾರಿಕೆಯ ಝಣತ್ಕಾರದ ಮಂಜುಳರವ ಕೇಳಿಬರುತ್ತಿರುವದು. ದಿನಗಳೆದುವು. ಆಕೆಯ ದೇಹವು ಶೀತಳೆಯಿಂದ ಕಂದಿ ಕುಂದಿ ಬಲಗುಂದಿತು. ಇದೀಗ ಮಧುಮಾಸ. ಮೋಹಕ ಬೆಳ್ದಿಂಗಳು. ಎಲೆವಳ್ಳಿಗಳಲ್ಲಿ ಪಕ್ಷಿಗಳ ಕೂಜನದಲ್ಲಿ ಚೆಲ್ವಿಕೆ ಸೂಸುತ್ತಿದೆ. ನಿಸರ್ಗವು ಹೀಗೆ ಸೊಗಸಿನಲ್ಲಿ ಹಾಸು ಹೊಕ್ಕಾಗಿದ್ದರೂ ವಾರಾಂಗನೆ ನಿರ್ಗತಿಕಳಾಗಿದ್ದಾಳೆ. ಆಗ ಸಾಧುವು " ಮೊದಲು ನನ್ನನ್ನು ನಿನ್ನ ಮನೆಗೆ ಕರೆದಿದ್ದಿ; ಈಗ ಬರುವ ಕಾಲ ಬಂದಿದೆ. "—ಎಂದು ಆಕೆಯನ್ನು ಉಪಚರಿಸುವನು. ಇಂತಹ ಶೃಂಗಾರಮಯ ಚಿತ್ರ ತಿಲಾಂಜಲಿಯಲ್ಲಿ ಕಾಣಬಾರದಿದ್ದರೂ ಅಲ್ಲಿಯ ರಸವೇ ತೀರ ಭಿನ್ನವಾದುದು. ಕೈಗೆ ಬಂದ ಮಗನು ಮಾಯವಾದಾಗ ಕವಿಯ ಭಾವನಾಮಯ ಹೃದಯಕ್ಕೆ ತಗಲಿದ ಆಘಾತವೆಂತಹದು ! ಇದೇ ಮಾದರಿಯ ವಿಷಯಗಳು ಆಂಗ್ಲಭಾಷೆಯಲ್ಲಿ Lycidas, Adonais, Elegy written in Country churchYard ಎಂಬ ವಿಲಾಪಗೀತೆಗಳಿಗೆ ವಸ್ತುಗಳಾಗಿಲ್ಲವೇ ? ಉಳಿದ ಕವನಗಳೊಡನೆ

ತೂಗಿದಾಗ, ದುಃಖದ ಏಕರೂಪಕ್ಕಿಂತಲೂ ಮುಖ್ಯವಾದ ತಿಲಾಂಜಲಿಯ ಲಕ್ಷಣಗಳೆಂದರೆ--ಕವಿಯ ಕಲ್ಪನಾವಿಲಾಸ ಹಾಗೂ ಅನುಪಮ ಆಶಾವಾದ. 'ಆಗಳಿನ ಬಿರಿಮುಗಳ,' ಎಂಬ ತಿಲಾಂಜಲಿಯ ಒಂದು ನುಡಿಯಲ್ಲಿ ಕವಿ ಶಂಕರಾಚಾರ್ಯರಂತೆ ಜೀವನದ ಕ್ಷಣಭಂಗುರತೆಗೆ ಎಡೆಗೊಟ್ಟಿದಾದರೆ, 'ಗುಡಿಯ ಕಟ್ಟುವ ಶಿಲ್ಪಿ' ಎಂಬ ಅಲ್ಲಿಯ ಇನ್ನೊಂದು ಪದ್ಯದಲ್ಲಿ ತಮ್ಮನ್ನೇ ತಾವು ಸಂತೈಸಿಕೊಳ್ಳುವರು. ಇದು ಬುದ್ಧಿಯ ಬಂಟತನವಲ್ಲದೇ ಏನು ?

ಇಂತಹ ಪ್ರತಿಭಾವಂತ ಕವಿಗಳು, ಆದರ್ಶ ಶಿಕ್ಷಕರು, ರಾಷ್ಟ್ರೀಯ ಮನೋವೃತ್ತಿಯುಳ್ಳವರು, ಆಶಾವಾದಿಗಳು, 'ಅಯಂ ನಿಜಃ ಪರೋವೇತಿ ಗಣನಾ ಲಘುಚೇತಸಾಂ' ಎಂಬ ತತ್ವವನ್ನು ಯಥಾಶಕ್ತಿ ಮೈಗೂಡಿಸಿಕೊಂಡವರೂ ಆದ ಸಾಲಿಯವರು ಕನ್ನಡದ ನಾಡು ನುಡಿಗೆ ಭೂಷಣಪ್ರಾಯರೇ ಸರಿ.

---

  

## ಕ. ಮಾಧವ

ನಾಟ್ಯ ಪಿತಾಮಹ ಟಿ. ಪಿ. ಕೈಲಾಸಂರು ಅಂದು ಎಡೆಬಿಡದೆ ನಾಟ್ಯದೈಸಿರಿಯನ್ನು ಧಾರೆಯಾಗಿ ಸುರಿಸಿದ್ದು ಕೇಳಿದೆ. ಮೊದಲೆಷ್ಟೋ ವೇಳೆ ಮಾತಿನ ರಭಸವು ' ಪಂಜಾಬ ಮೇಲ್ ' ನಂತೆ ಎನಿಸಿತು. ಆಯಿತು. ಆ–ವೇಗವಿದ್ದರೇನಾಯಿತು ? ಅದರ ಕೊಂಚ ಝುಳವಾದರೂ ತಾಗಲೆಂದು ತೀರ ಸೂಕ್ಷ್ಮವಾಗಿ ಪರಿಶೀಲಿಸಿವಾಗ ಅವರ ಹಾವಭಾವದ, ಮಾತಿನ ಮಿಂಚಿನ ಅಸ್ಪಷ್ಟ ಕಲ್ಪನೆ ಮೊಳಗಹತ್ತಿತು. ನಾಟ್ಯಕಲೆಯ ಈ ರಸದೂಟವನ್ನು ಮೊದಲು ಸಲ ನನಗೆ ಒದವಿಸಿದವರು ಕ. ಮಾಧವರು (–ಕಬ್ಬೂರ ಮಧ್ವ ರಾವ್‌ವಕೀಲರು–) ಬಣ್ಣ ಬಳಿದುಕೊಂಡಿರದಿದ್ದರೂ ಬಾಯಿಪಾಠ ಹೇಳುವ ನಾಟಕಗಳನ್ನು ಕೇಳಲು ಸಿಕ್ಕಿದ್ದು ಅಂದು ಅವರ ಮನೆಯಲ್ಲಿಯೋ. ಮುಂದೆಷ್ಟು ದಿನ ಕೈಲಾಸಂರ ಪ್ರತಿಭೆಗೆ ಮರುಳಾಗಿ ಅವರನ್ನು ಮನೆಯಲ್ಲಿ ರಿಸಿಕೊಂಡರೋ ಬಹುತರವಾಗಿ ಕೈಲಾಸಂರಿಗೇ ಗೊತ್ತು. ಕಬ್ಬೂರವರಂತೂ ಅತಿಥಿಗಳಿಗೆ ಕಾಲನಿರ್ದೇಶ ಹಾಕುವಂತಿಲ್ಲ. ಅಂತಹ ಆತಿಥ್ಯದ ರೀತಿಯೋ ಅವರದು. ಹೃದಯದ ವಿಶಾಲತೆಯೇ ಅಂತಹದು. ಈಗಂತೂ ಅತಿಥಿಯಾಗಿ ದೊರೆತವರು ನಾಟ್ಯಕಲಾವಿಶಾರದರು, ನುರಿತ ನಟರು ! ಅಂದಮೇಲೇನು ? ರಸಿಕತೆಯ ನೆಲೆವೀಡಾದ ವಕೀಲರೇನೋ ನಾಲಗೆಯಿಂದಲೇ ವಿಶ್ವಾಮಿತ್ರನ ಸೃಷ್ಟಿ ನಿರ್ಮಿಸಬಲ್ಲ ನಾಟಕಕಾರರೇನೊ !

ಕನ್ನಡ ಸಂಸ್ಕೃತಿಯನ್ನು ಮೈಗೂಡಿಸಿಕೊಂಡು ಕ್ಷಣಕ್ಷಣಕ್ಕೆ ತರ್ಕ ಬದ್ಧವಾಗಿ ನಾಟಕೀ ರೀತಿಯಲ್ಲಿ ಹೊರಹೊಮ್ಮಿಸುವ ಕೈಲಾಸಂರ ವಿಷಯ ವಾಗಿ ಇಷ್ಟೊಂದು ಪೂಜ್ಯಭಾವ ತಳೆದು, ಅವರ ಒಂದೊಂದು ನುಡಿಯೆಂದರೆ ಮುತ್ತೆಂಬ ಕಲ್ಪನೆಯಿಂದ ಲಾಲಿಸುವ ಈ ವ್ಯಕ್ತಿಯಲ್ಲಿಯೂ ಅಂತಹ ಅನು ಪಮತೆ, ಅಪೂರ್ವತೆ, ಏನಿರಬಹುದೆಂದು ನನಗೆ ನಿಜವಾಗಿಯೂ ಒಡೆಯ ಲಾಗದ ಒಗಟವಾಯಿತು. ಇಬ್ಬರ ಸಾಮ್ಯದ ಸಮಸ್ಯೆ ಪ್ರಬಲವಾಯಿತು.

ವಕೀಲರ ವ್ಯಕ್ತಿತ್ವದ ಕಲ್ಪನೆಯೇ ಕೆಲದಿನದ ಉಸಿರಾಯಿತು. ಅವರ ಮಾತು ಕತೆ, ಚಟ ಹಟ, ಆಚಾರ ವಿಚಾರ–ಎಲ್ಲವನ್ನೂ ತೂಗಿ ತಿಳಿದುಕೊಳ್ಳುವದು ನಿತ್ಯದ ಹವ್ಯಾಸವಾಗಿ ಪರಿಣಮಿಸಿತು.

ಯಾರಿಗಾದರೂ ಮೊದಲು ಕ. ಮಾಧವರ ವ್ಯಕ್ತಿತ್ವದ ಸ್ಫುಟತೆಯ ಅರಿವು ಉಂಟಾಗುವದೆಂದರೆ ಅವರ ಗರಡಿಯಾಳಿನಂತಹ ಮೈಕಟ್ಟು—ಆ ಮೇಲೆ ಅದಕ್ಕೆ ಹೊಂದಿಕೆಯೆನಿಸದ ಕುಳ್ಳು ದೇಹ. ಉತ್ತರ ಹಿಂದುಸ್ತಾನದ ವೇಷ ಭೂಷಗಳ ಪ್ರತೀಕವಾದ ಶುಭ್ರವಾದ ಖಾದಿ ಸುರುವಾಲ ಶ್ರೀಯುತರಿಗೆ ಅತ್ಯಂತ ಪ್ರಿಯ.ಅದರ ಜೊತೆಗೆ ಚಡಾವು. ದರ್ಪದ್ಯೋತಕವಾದ ಕಣ್ಣು, ನಸುದೊಡ್ಡ ಮೂಗು, ಹರವಾದ ದುಂಡು ಮೊಗ, ಬಾಯಲ್ಲಿ ಸಾಮಾನ್ಯತಃ ಯಾವಾಗಲೂ–ದಿನದ ನಿದ್ರೆಯ ಭಾಗ ಬಿಟ್ಟು–ಹೊಗೆದೋರುವ ಸಿಗರೇಟು, ಬೆಳ್ಳಿಕಟ್ಟಿನ ಸಾಗವಾನಿ ವಾಕಿಂಗ್ ಸ್ಟಿಕ್–ಇಷ್ಟು ಮಾತ್ರ ಏನು ಮರೆತರೂ ಅವರ ನಿಕಟ ಪರಿಚಯವಿದ್ದವರ ಚಿತ್ತ ಭಿತ್ತಿಯಲ್ಲಿ ಚಿತ್ರ ಕೊರೆದಂತೆ ಮೂಡಿರಲು ಸಾಕು.

ಕೇವಲ ಅಂಗಸೌಷ್ಟವವಷ್ಟೇ ಮಧ್ವರಾಯರ ವ್ಯಕ್ತಿತ್ವದ ವೈಶಿಷ್ಟ್ಯವಲ್ಲ. ಆ ವ್ಯಕ್ತಿತ್ವಕ್ಕೆ ಚಿರನೂತನತೆ ತರುವ ಅವರ ಮಾತು ತೂಕದವು. ಅಷ್ಟು ವಿಚಾರಪೂರ್ಣ. ಸಾಮಾನ್ಯತಃ ಹಾಸ್ಯರಸಪ್ರಧಾನವಾದ ಅವರ ಮಾತು ಕೇಳುವದೆಂದರೆ ಎಷ್ಟೋ ತಜ್ಞ ನ್ಯಾಯಾಧೀಶರಿಗೆ ಉಬ್ಬು. ಅದರೊಡನೆ ಆಗಾಗ ಥಳಕಿನಂತೆ ತೂರಿಬರುವ ವಿಚಾರದ ನೆರವು. ಮಾತುಗಳನ್ನು ನೇರವಾಗಿ ಹೃದಯಕ್ಕೆ ಮುಟ್ಟಿಸುವ ಉಕ್ಕಿನ ಶಬ್ದಗಳು. ವಕೀಲನೆಂದು ಕಾಯಿದೆಯ ಹಿರಿಹೊತ್ತಿಗೆಗಳ ಶಬ್ದಬ್ರಹ್ಮದಲ್ಲಿಯೇ ಯಾವಾಗಲೂ ಅವರು ತಲೆಹಾಕಿದವರಲ್ಲ. ಹಳ್ಳಿಯ ರೀತಿ ನೀತಿ, ಹೊಲ ಮನೆಗಳ ರಚನೆ, ಅಲ್ಲಿಯ ಗಂಡು ಹೆಣ್ಣಿನೆಸಮಸ್ಯೆ, ಜನರ ಸಂಸ್ಕೃತಿ, ಭಾವನಾ ಪ್ರಪಂಚ– ಎಲ್ಲದರಲ್ಲಿಯೂ ಸಮರಸವಾಗಿ ಸುಳ್ಳಿನಿಸಿದ ಈ ಜಗತ್ತಿನ ಸುಳ್ಳು ಸಂತೆಯಲ್ಲಿ ವ್ಯವಹರಿಸಬೇಕೆನ್ನುವ ಬಗೆ ಅವರದು. ಕಬ್ಬೂರವರ ಕನ್ನಡತನದ ಯಥಾರ್ಥ ಜ್ಞಾನವಾಗಬೇಕಿದ್ದಲ್ಲಿ ಮೊಟ್ಟಮೊದಲು ಅವರು ಓದುವ ಮೊಗಸಾಲೆಯನ್ನು ನೋಡಿಯೇ ತೀರಬೇಕು. ಅಲ್ಲಿ ಕಾಣದ ಕನ್ನಡ ಪತ್ರಿಕೆಗಳು ಕರ್ನಾಟಕದಲ್ಲಿಯೇ ಇರಲಿಕ್ಕಿಲ್ಲ. ಜಯಂತಿ,

ಜಯಕರ್ನಾಟಕ,ಪ್ರೇಮ,ಕನ್ನಡನುಡಿ ಮೊದಲಾದ ಪ್ರಚಲಿತ ಪತ್ರಿಕೆಗಳಷ್ಟೇ ಏಕೆ? ನಾವು ಒಳ್ಳೇ ಕನ್ನಡ ಪತ್ರಿಕೆ ಹೊರಡಿಸಬೇಕೆಂದಿದ್ದೇವೆ ಎಂದು ಆಶ್ವಾಸನ ಕೊಡುವ ಪ್ರಕಟನೆಗಾರರಿಗೂ ಮೊದಲು ಚಂದಾ ಹಣ ಕೊಟ್ಟು ಸಹಾಯ ಸಲ್ಲಿಸುವ ರೂಢಿ ಅವರದು. ಕನ್ನಡ ಸೇವೆಯನ್ನೇ ಗುರಿಯಾಗಿ ರಿಸಿಕೊಂಡ ಎಲ್ಲ ಗ್ರಂಥಮಾಲೆಗಳ ಹೊತ್ತಿಗೆಗಳು ಇಂದಿಗೂ ವಕೀಲರ ಗ್ರಂಥಭಾಂಡಾರದಲ್ಲಿ ಕಾಣುವವೆಂದಮೇಲೆ, ದುಡ್ಡು ಕೊಟ್ಟು ಪುಸ್ತಕ ಓದುವವರ ಸಂಖ್ಯೇ ಎಷ್ಟೋ ಮಟ್ಟಿಗೆ ಹೆಚ್ಚಾಗುತ್ತಲಿದೆ ಎಂದು ಸಮಾಧಾನವಾಗುವಂತಿದೆ. ಇಷ್ಟಕ್ಕೇ ಆಂಗ್ಲ ಪತ್ರಿಕೆಗಳ ಉಪಯುಕ್ತತೆ ಬೇಲು ಗಳೆಯುವ ಮಡಿವಂತರು ವಕೀಲರೆಂದು ತರಾಹಾಕಲಾಗದೆಂಬೇ ಅಲ್ಲಿ ಕ್ರಾನಿಕಲ್, ಫ್ರೀಪ್ರೆಸ್, ಹಿಂದು, ಟಾಯಿಮ್ಸ್, ಇಲಸ್ಟ್ರೇಟೆಡ್ ವೀಕ್ಲಿ ಒರ ಗಿರುತ್ತಿದ್ದವು.

ಬರೀ ನಗೆಬರಹಗಳ ಝುಗ್ಗಂಬ ಜಿಳಕಿನಿಂದ ಕನ್ನಡ ನುಡಿಯ ಏಳ್ಗೆಯಾಗದೆಂದು ಸಂಶೋಧನಾತ್ಮಕ ಇಲ್ಲವೇ ವಿಚಾರಪರ ಸಾಹಿತ್ಯವೂ ತಲೆ ಎತ್ತಬೇಕೆಂದು ವಕೀಲರ ಸ್ಪಷ್ಟ ಮತ. ವಿನೋದಕತೆ ಉನ್ಮಾದದ ಅರಿವು ಮಾಡಿಕೊಟ್ಟರೂ ಅದು ಎಷ್ಟಾದರೂ ಕ್ಷಣಿಕ. ಹೆಚ್ಚಾದರೆ ಸ್ಫೂರ್ತಿಗೆ ಹಿನ್ನೆಲೆ. ಕರ್ನಾಟಕದ ಏಕೀಕರಣದಂತಹ ಬಿಕ್ಕಟ್ಟಿನ ಸಮಸ್ಯೆ—ವಸ್ತು ಸ್ಥಿತಿಯ ಅವಲೋಕನ, ಭಿನ್ನ ಭಾಷೆಗಳ ಆಕ್ರಮಣ ಶೀಲತೆ, ಕನ್ನಡ ನುಡಿಯ ನೈಜ ಮೋಹ, ನಮ್ಮ ಖನಿಜ ಸಂಪತ್ತು, ವಿದ್ಯುಚ್ಛಕ್ತಿಯ ಅನುಕೂಲತೆ, ಬಂದರಗಳ ಸೌಕರ್ಯ, ಜನತೆಯ ಎದೆಗಾರಿಕೆಗಳ ಮೇಲೆ ಅವಲಂಬಿಸಿದೆ ಎಂದು ಕೂಲಂಕಷ ಅಭ್ಯಾಸ ಮಾಡಿ ಜನತೆಯ ಮುಂದಿರಿಸುವ ಹಂಬಲು ಅವಶ್ಯವಾಗಿ ಅವರಿಗಿದ್ದಿತು. ಹಾಗೇ ಕಳೆದ ವರ್ಷದ ವಿಜಯದಶಮಿಯ ದಿನ, ಕನ್ನಡ ನಾಡಿನ ಏಳ್ಗೆ•ಸಂಬಂಧಪಟ್ಟ ಅವರ ಲೇಖನ ಓದಿದವರಿಗೆ ಎಷ್ಟೋ ರಚನಾತ್ಮಕತೆಯ ಅರಿವಾಗಿರಬಹುದು.

ಚಲಚ್ಚಿತ್ರ—ಮತ್ತು ನಾಟಕಗಳನ್ನು ಮಧ್ವರಾಯರು ನೋಡುತ್ತಿದ್ದುದು ವಿರಳ. ಒಳ್ಳೆಯವು ಬರುವುದು ಕ್ವಚಿತವೆಂದೇ ಹೀಗಿರಬಹುದು. ಆದರೂ ಅಕಸ್ಮಾತ್ ಒಮ್ಮೆ ಚಿತ್ತಾಪಹಾರಿ ಚಿತ್ರಪಟ ನೋಡಿದುದಾದರೆ ಮೂರು ನಾಲ್ಕುಸಲ ಅದನ್ನೇ ·ನೋಡಿ ತಿಳಿಯದಿದ್ದರೆ ಅವರ ಮನಕೆ

ಸಂತಸವಿಲ್ಲ. ಏನೇ ಇರಲಿ, ಚಲಚ್ಚಿತ್ರದಲ್ಲಿ ಆದರ್ಶ ಜೀವನದ ಪ್ರತಿಬಿಂಬ, ಕಲಾಪೂರ್ಣನಿರೂಪಣೆ, ನಾಡ ನುಡಿಯ ಪ್ರೇಮ—ಮೊದಲಾದ ಲಕ್ಷಣ ಗಳ ಅವಿರ್ಭಾವ ಕಾಣಬಾರದಿದ್ದರೆ ಅದು ಕಸಕ್ಕೆ ಸಮಾನವೆಂದು ಶ್ರೀಯುತರ ನಿಷ್ಕರ್ಷೆ. ಅಂತೇ ನಮ್ಮ ಊರಲ್ಲಿ ಬೇರೆ ಒಳ್ಳೇ ಚಿತ್ರಪಟಗಳಿದ್ದರೂ 'ಲಾರ್ಡ ಕ್ಲೈವ' ದಂತಹ ದೇಶದ್ರೋಹಿ ಚಿತ್ರಪಟ ನೋಡಿದ್ದಕ್ಕೆಂದು ಮನೆಯ ಹುಡುಗರನ್ನೆಲ್ಲ ವಕೀಲರು ಬೈದುದುಂಟು !

ವೀರ ಮಾತೆ ಕುಂತಿ, ಭೀಷ್ಮ, ಶ್ರೀಕೃಷ್ಣ ಎಂಬ ಪೌರಾಣಿಕ ವ್ಯಕ್ತಿಗಳ ಓಜಸ್ಸನ್ನು ಕಲಾಕೃತಿಗಳಾಗಿಸಿ ಅರಳಿಸಿದ್ದರೂ, ವಕೀಲರು ಹೆಚ್ಚು ಬರೆಯುವ ಚಟದವರಲ್ಲ. ಹೀಗಿದ್ದರೂ ಮಹಾ ಕಾವ್ಯಪ್ರಪಂಚದ ಆದರ್ಶಗಳೆಲ್ಲ ಇಪ್ಪತ್ತನೆಯ ಶತಮಾನದ ಕ್ರಾಂತಿಯುಗದಲ್ಲಿಯೂ ಇಳಿದೇ ತೀರಲಿ ಎಂಬ ಹಟಮಾರಿತನವು ಅವರಿಗಿರಲಿಲ್ಲ. ಅಂತೇ ಶ್ರೀನಿವಾಸ, ಶ್ರೀರಂಗ, ಕಾರಂತ, ಅ. ನ. ಕೃ. ದೇವುಡು ಮುಂತಾದ ಪ್ರತಿಭಾವಂತರ ಕಲಾಕೃತಿಗಳ ರಸಾಸ್ವಾದನೆಯಿಂದ ಮಾಧವರು ಮುಗ್ಧರಾಗಿ ಹೊಗಳುತ್ತಿದ್ದುದನ್ನು ನಾನೇ ಕೇಳಿದ್ದೇನೆ.

ನಿರುದ್ಯೋಗಿಯಾಗಿರುವುದೇಕೆಂದು ಭಿನ್ನ ಭಾಷೆಗಳ ಅಭ್ಯಾಸ, ಮನೆಯಲ್ಲಿ ಅಚ್ಚುಕಟ್ಟುತನ ಕಾಯ್ದುಕೊಳ್ಳುವದು, ಬಾನುಲಿಯಲ್ಲಿ ತಲ್ಯಾರಖಾನರ ಬಾಯಿಂದ ಕ್ರಿಕೆಟ್ ಆಟದ ಚಿತ್ರಮಯ ವಿಮರ್ಶೆ ಕೇಳುವದು, ಕಟ್ಟಿಗೆಯ ಅಂದವಾದ ವಸ್ತು ಸಿದ್ಧಗೊಳಿಸುವದರ ಜೊತೆಗೆ—ಇನ್ನೂ ಉದಾತ್ತ ಧ್ಯೇಯದಿಂದ ಆಂಗ್ಲ "ಟೈಪ್ ರೈಟರ್" ನಂತೆ ಕನ್ನಡದಲ್ಲಿ ಲಿಪಿ ಸುಧಾರಣೆ ಮಾಡಬೇಕೆಂದು ವಕೀಲರ ಆಕಾಂಕ್ಷೆ. ಹಾಗೇ ಅವರು ಅವಿಶ್ರಾಂತ ಪರಿಶ್ರಮದಿಂದ ತಮ್ಮ ಈ ಯೋಜನೆಯನ್ನು ಪ್ರಮುಖ ಪತ್ರಿಕೆಗಳ ಮುಖಾಂತರ ಕನ್ನಡ ಓದುಗರ ಮುಂದೆ ಇಟ್ಟರು. ಜನತೆಗೆಲ್ಲ ಅದರ ಗುಣಾವಗುಣಗಳ ಕಲ್ಪನೆ ಬಂದ ಮೇಲೆ ಅದು ನಮ್ಮ ಸಾಮಾಜಿಕ ಜೀವನದಲ್ಲಿ ಅಡಿಯಿಡಬೇಕು.

ವಕೀಲರು ಕುಟುಂಬ ವತ್ಸಲರು. ಮನೆಯ ತುಂಬ ಮಕ್ಕಳು, ಆಪ್ತೇಷ್ಟರು, ನಿರಾಶ್ರಿತ ವಿದ್ಯಾರ್ಥಿಗಳು ಇರುವದೆಂದರೆ ಕಣ್ಣಿಗೆ ಹಬ್ಬ. ಅವರ ಮನೆಯೆಂದರೆ ಛತ್ರವೇನೋ ಎಂಬಂತೆ ಅಷ್ಟು ಜನರು ಬರುವವರು,

ಇರುವವರು ; ಹೋಗುವವರು. ಯಾಕೆಂದರೆ, ವಕೀಲರು ಎಲ್ಲರಿಗೂ ಅಷ್ಟು ಬೇಕಾದವರು. ' ವಸು-ಧೈವ ಕುಟುಂಬಕಂ ' ಎಂಬ ಪಂಗಡಕ್ಕೆ ಒಳಪಟ್ಟ ವರೇನೊ !

ಕನ್ನಡ ನಾಡು ಹೆಮ್ಮೆ ಪಡಬಹುದಾದ ವ್ಯಕ್ತಿತ್ವ-ಬುದ್ಧಿ ಇದ್ದ ಕಬ್ಬೂರರು ಯಾವ ಕೆಲಸ ಕೈಕೊಳ್ಳಲಿ, ಯಾವ ಸಂಸ್ಥೆಗೆ ಹಣದ ಸಹಾಯ ಮಾಡಲಿ, ತಮ್ಮ ಜಯಭೇರಿಯನ್ನು ಹೊಡಿಸುವುದು ಅವರಿಗೆ ಹೇಯ. ವಕೀಲರ ಉಗ್ರ ಮೋರೆಯ ಹಿನ್ನೆಲೆಯಲ್ಲಿ ಅಂತಹ ಸೌಹಾರ್ದ, ನೆಲೆಗೊಂಡಿತ್ತೆಂದು ತೀರ ಪರಿಚಿತರಿಗಷ್ಟೇ ಅನುಭವ.

ಕನ್ನಡ ನುಡಿಯ ನಿಸ್ಸೀಮ ಸೇವಕ, ಮೇಲ್ತರಗತಿಯ ಕಲೋಪಾಸಕ, ಕುಶಲವಾಗ್ಮಿ, ಕೀರ್ತಿಯ ಆಸೆತೊರೆದು ಸದ್ದಿಲ್ಲದೆ ದುಡಿಯುವವ, ಗೆಳೆಯರಲ್ಲಿ ರಂಜಕ ಹರಟೆಗಾರ, ಹಾಗೂ ಕ್ರಾಂತಿಕಾರರಾದ ಕ. ಮಾಧವ ವಕೀಲರು ಅಲ್ಲದೆ ಕಣ್ಮರೆಯಾದ ಬೇರೆ ಹಲವು ವಿಭೂತಿಗಳಂತಹರು ವಿರಳವೆಂದು ವಿಷಾದಿಸಿ ಸುಮ್ಮನೆ ಕುಳಿತರೇನು ಬಂತು ? ಅವರ ಆದರ್ಶದ ಕನಸುಗಳನ್ನು ವಾಸ್ತವರಂಗಕ್ಕೆ ತರಲೆಳಿಸಿದರೆ ಮಾತ್ರ ಅವರಿಗಾಗಿ ಬಾಷ್ಪಾಂಜಲಿ ಅರ್ಪಿಸಿದ್ದು ಸಾರ್ಥಕವೆನಿಸೀತು ! ಕನ್ನಡತನದ ಹೊಣೆಗಾರಿಕೆ ಅರಿತಂತಾದೀತು ! ಆ ಸುದಿನವೆಂದು ಉದಿಸುವದೊ !

---

## ಆನಂದಕಂದ

ಓರಣವಾಗಿ ಬಾಚಿದ ತಲೆಗೂದಲು, ನಸುವೂ ಬಾಗದ ನಿಲುವು, ಕೋಟಿನ ಆಡಂಬರವಿಲ್ಲದ ಶುಭ್ರವಾದ ಖಾದಿಯ ಉಡುಪು, ಮೇಲೊಂದು ಅಚ್ಚಿನ ವಲ್ಲಿ, ಕನ್ನಡಕಗಳಿಂದ ಇನ್ನೂ ಸ್ಫುಟವಾಗಿ ತೋರುವ ಕಣ್ಣು, ಕೊಂಚ ಬಾಗಿದ ಮೂಗು, ನಸುಗೆಂಪು ಬಣ್ಣ, ಯಾರನ್ನು ಕಂಡಾಗಲೂ ಸ್ವಾಭಾವಿಕ ವಿನಯ, ಸಂಗೀತಜ್ಞನಿಗೊಪ್ಪುವ ಮಾತಿನ ಹಾವಭಾವ, ಕೈಯಲ್ಲಿ ಏನೊಂದು ಕಾರಣದಿಂದ ಯಾವಾಗಲೂ ಕಂಡುಬರುವ ಹೊತ್ತಿಗೆಗಳ ಚೀಲ— ಮೊದಲಾದ ಲಕ್ಷಣಗಳ ಆವಿರ್ಭಾವವೆನಿಸಿ ಜಯಂತಿ ಕಾರ್ಯಾಲಯದೆಡೆಗೆ ಗೋಪುರಗಡಿಯಾರದ ಮುಂದೆ ಹಾಯ್ದು ಧಾರ್ಮಿಕ ನಿಷ್ಠೆಯಿಂದ ಮುಂಜಾನೆ ಹೊರಡುವ ವ್ಯಕ್ತಿ ಎಂದರೆ ಬೆಟಗೇರಿ ಕೃಷ್ಣಶರ್ಮರು ಅವರೇ ಆನಂದಕಂದರೆಂದು ಎಲ್ಲ ಕನ್ನಡಿಗರಿಗೆ ಗೊತ್ತು. ಅಷ್ಟೊಂದು ಧಾರವಾಡದ ಕನ್ನಡದ ದೈನಿಕ ಚಟುವಟಿಕೆಗಳನ್ನು ಸಾರ್ವಜನಿಕ ಸಂಘ ಸಂಸ್ಥೆಗಳ ಕಾರ್ಯಕಲಾಪಗಳನ್ನು ಅಳವಡಿಸಿಕೊಂಡವರು ಅವರು. ಇಂತಹ ವ್ಯಕ್ತಿಯ ಪಾಂಡಿತ್ಯ, ರಸಿಕತೆ, ಕನ್ನಡದ ಮೋಹ, ಸರಲತೆ, ಶ್ರದ್ಧೆಯ ರಹಸ್ಯವೇನಿರಬಹುದೆಂದು ತಿಳಿಯುವ ಆಕಾಂಕ್ಷೆಯು ಕಳೆದ ಹತ್ತು ವರ್ಷಗಳಿಂದಲೂ ನನ್ನಲ್ಲಿ ಹೆಚ್ಚುತ್ತಿತ್ತು. ಕೊನೆಗೊಮ್ಮೆ ಸೂಕ್ಷ್ಮ ನಿರೀಕ್ಷಣಾ ಬುದ್ಧಿಗೆ ಮನಸೋತೆ. ಆ ಮೇಲೇನು ? ಅವರ ಸೂಕ್ಷ್ಮ ಪರಿಚಯದ ವಿಷಯವೇ ಪ್ರಮುಖವಾಗಿ ಪರಿಣಮಿಸಿತು.

ಬೆಟಗೇರಿಯವರು ಬೆಳಗಾಂವಿ ಜಿಲ್ಹೆಯ ಗೋಕಾಕ ತಾಲೂಕಿನ ಸಾಮಾನ್ಯ ಹಳ್ಳಿಯ ಸಂಪ್ರದಾಯವಂತ ಮನೆತನದವರಿದ್ದಾರೆಂದು ‘ ಕೃಷ್ಣಶರ್ಮ ’ ಎಂಬ ಅವರ ಹೆಸರಿನಿಂದ ಥಟ್ಟನೆ ಹೊಳೆಯುವದು ಕ್ವಚಿತ. ಬಹುತರವಾಗಿ ಅವರು ಬೆಂಗಳೂರ ಮೈಸೂರ ಕಡೆಯವರಿರಬೇಕೆಂದು ಎಷ್ಟೋ ಜನರಿಗೆ ಸಂಶಯ ಬರುವಂತಿದೆ. ಆ ಸಂಶಯ ನಿರಾಧಾರವಾದುದೆಂದು ನಾನು ಮೊದಲ ಸಲ ‘ ಮಾನವತೆಯ ಅರಳಿಕೆ ’

ಎಂಬ ಆತ್ಮಕಥನ ದಿಂದ ಮನಗಂಡದ್ದು. ಬಾಲ್ಯದಲ್ಲಿ ಹಳ್ಳಿಯಲ್ಲಿರುವವಷ್ಟೆ ಅಲ್ಲದೆ ಸಂಪೂರ್ಣವಾಗಿ ಅಲ್ಲಿಯ ವಾತಾವರಣದಲ್ಲಿ ಸಮರಸವಾಗಿ ಬೆಳೆದರು. ಸ್ವಂತದ ಬೇಸಾಯವಿದ್ದುತು. ಹಳ್ಳಿಗರ ಬಾಳಿನ ಕಷ್ಟ ನಷ್ಟಗಳನ್ನು ಸಂಸ್ಕೃತಿ ಸೌಂದರ್ಯಗಳನ್ನು ಮುಂದೆ ಕನ್ನಡ ಸಾಹಿತ್ಯದಲ್ಲಿ ರೂಪಿಸಲು ಆಗಿಂದಲೆ ಆವರಿಗೆ ಅನುವು ದೊರೆಯಿತು. ಲೋಕಪ್ರಿಯವಾದ ಅವರ ಸಣ್ಣ ಕತೆಗಳಲ್ಲಿಯ್ಯ ಪುಟ ಪುಟದಲ್ಲಿ ಹಳ್ಳಿಯ ಜೀ ವ ನ ದ ಅನುಭವದ ಅಪೂರ್ವ ಛಾಯೆ ಕಾಣುವದು. ಇವರ ತಂದೆ ರಸಿಕರು, ಜ್ಯೋತಿಷ್ಯಕಾರರು, ವಾಸ್ತುಶಿಲ್ಪಿತಜ್ಞರು. ಕುಶಲ ಕುಲಕರ್ಣಿಯರು ಎಂದು ಹೆಸರವಾಸಿಯಾಗಿದ್ದರಿಂದ ಮನೆಗೆ ಬೇರೆ ಬೇರೆ ವ್ಯವಸಾಯದ ಜನರು ಬರುಹೋಗುವದು ನಡೆಯುತ್ತಿತ್ತು. ಈ ವಿಶಿಷ್ಟಜಾತಿಯ ಜನರ ಸಂಪರ್ಕ ಆನಂದಕಂದರ ಮೇಲೆ ಸ್ವಲ್ಪಾದರೂ ಆಗದಿರುವದುಂಟೆ ?

ಇಷ್ಟು ದಿನದ ರಸವತ್ತಾದ ಆಟ ನೋಟದ ಹಳ್ಳಿಯ ಬಾಳಿನಿಂದ ಆನಂದಕಂದರಿಗೆ ಕೇವಲ ಸುಖದ ಕನಸುಗಳ ಅನುಭವವೇ ಉಂಟಾಗಿತ್ತೆನ್ನ ಬೇಕು. ಈಗ ನಾಣ್ಯದ ಇನ್ನೊಂದು ಬದಿಯ ಕಲ್ಪನೆ ಕ್ರಮೇಣ ತಲೆದೋರ ಹತ್ತಿತು. ದುಃಖದ ಕರಾಳ ಸ್ವರೂಪದ ಪ್ರಥಮ ದರ್ಶನವೆಂಬಂತೆ ಮೊದಲು ತಂದೆ ತೀರಿಕೊಂಡರು. ಮನೆತನ ಸಾಗಿಸುವದರ ಚಿಂತೆ ಆವರಿಸಿದರೂ ಕ್ರಮೇಣ ಈ ಘಟನೆ ಮರೆವಿನ ಮಂದಿರಕ್ಕೆ ಧಾವಿಸಿತು. ಆದರೆ ಇಷ್ಟರಲ್ಲಿ ಮತ್ತೊಂದು ಬರಸಿಡಿಲು—ಅವರ ಅಣ್ಣನ ಮರಣ. ಮೂರನೇ ಪ್ರಸಕ್ತಿಯಲ್ಲಿ ಆನಂದಕಂದರು ವಿಷಮಜ್ವರದಿಂದ ಪೀಡಿತರಾಗಿ ಪಾರಾದುದೇ ದೈವೇಚ್ಛೆ ಎನಿಸಿತು. ಎಂ. ಎ. ಪದವಿಯನ್ನು ಪಡೆಯಲಿದ್ದ ಅವರ ಸಹೋದರ ವಿಜಯೀಂದ್ರನ ಇತ್ತೀಚಿನ ಅಕಾಲ ಮರಣದ ಬ ರೆ ಯಿ ೦ ದ ೦ ತೂ ‘ ಛಿದ್ರೆಷ್ವನರ್ಥಾ ಬಹುಲೀ ಭವಂತಿ ’ ಎಂಬ ಉಕ್ತಿಯ ಕಟು ನಿದರ್ಶನ ಆನಂದಕಂದರಿಗೆ ಆಯಿತೆಂಬಲ್ಲಿ ಸಂಶಯವಿಲ್ಲ.

ಜೀವನದಲ್ಲಿ ನಿರಸದ ಜ್ವಾಲೆ ಮೇಲೆಂದು ಎಷ್ಟು ದಿನ ಹೀಗೆಯೇ ಕೃಷ್ಣಶರ್ಮರಿಗನಿಸೀತು ? ಕಾಲಚಕ್ರದ ಗತಿಯಲ್ಲಿ ಎಂತೆಂತಹ ಮಾರ್ಪಾಟಾಗುವದಿಲ್ಲ. ! ಎಲ್ಲವೂ ಕಾಣದ ಕೈಯ್ಯ ಕೈಚಳಕ. ಅಂತೇ ಆಂಗ್ಲಕವಿ ಪ್ರವರ ಶೆಲ್ಲೆ ‘ If winter comes can spring be far behind? ’

ಎಂದು ಆಹ್ವಾನ ಕೊಟ್ಟಿದ್ದು. ಈಗ ಆನಂದಕಂದರ ದಿಟ್ಟಿ ವಿಶಾಲಪ್ರಪಂಚ ದತ್ತ ಹರಿಯಿತು. ಅದು ೧೯೨೦ನೇ ಇಸ್ವಿ. ಅಸಹಕಾರ ಚಳವಳಿ ಎಲ್ಲೆಡೆ ರಭಸದಿಂದ ಸಾಗಿತ್ತು. ನಾಡಸೇವೆ ಸಲ್ಲಿಸುವ ಧ್ಯೇಯದಿಂದ ಪ್ರೇರಿತರಾಗಿ ಬೆಳಗಾವಿಯ ರಾಷ್ಟ್ರೀಯ ಶಾಲೆಯಲ್ಲಿ ಅಧ್ಯಾಪಕವೃತ್ತಿ ಕೈಕೊಂಡರು. ಕರ್ನಾಟಕದ ಅಂದಿನ ಪರಿಸ್ಥಿತಿಯಾದರೂ ಎಂತಹದು! ಬೆಳಗಾವಿಯ ಪ್ರಮುಖ ಕಾರ್ಯಕರ್ತರಾದ ಡಾಕ್ಟರ ಸವಣೂರರು ಕರ್ನಾಟಕತ್ವದ ಪ್ರಚಾರದ ಸತ್ರ ಆದೇ ಕೈಕೊಂಡಿದ್ದರು. ಆನಂದಕಂದರೂ ಈ ಪ್ರಚಾರಕರ ಗುಂಪಿಗೆ ಸೇರಿ ಕನ್ನಡ ಭಾಷೆಯ ದುಃಸ್ಥಿತಿ, ಕನ್ನಡನಾಡಿನ ಛಿನ್ನ ವಿಚ್ಛಿನ್ನತೆಯ ದುಷ್ಪರಿಣಾಮವನ್ನು ತಮ್ಮ ಭಾವಗೀತೆಗಳ ಮುಖಾಂತರ ಜನತೆಯ ಹೃದಯಾಂತರಾಳದಲ್ಲಿ ಬಿಂಬಿಸಲೆಸಗಿದರು. ನೆರೆ ನಾಡಿನವರಾದ ಮಹಾರಾಷ್ಟ್ರೀಯರ ದೇಶಭಕ್ತಿ ಕಂಡು ಬೆರಗೇರಿಯುವರು ಕನ್ನಡಿಗರಲ್ಲಿಯೂ ಇಂತಹ ಉದಾತ್ತಭಾವನೆ ನೆಲೆಗೊಳ್ಳಲೆಂದು ಎಣಿಸಿ 'ನನ್ನದು ಈ ಕನ್ನಡ ನಾಡು' ಎಂಬ ಹೃದಯಸ್ಪರ್ಶಿ ಗೀತೆ ಹಾಡಿದರು. ಕನ್ನಡನುಡಿ ಶ್ರವಣ ಕಟು ಎಂದು ಹೀಗಳೆಯುವವರನ್ನು ಕಂಡು ಕಿಡಿಕಿಡಿಯಾಗಿ 'ಎನಿತು ಇನಿದು ಈ ಕನ್ನಡ ನುಡಿಯು' ಎಂದು ಹಾಡಿದಾಗಲೇ ಕನ್ನಡಿಗರು ಕಣ್ತೆರೆದರು. ಮೊದಮೊದಲು ಆನಂದಕಂದರಿಗೆ ಮಹಾರಾಷ್ಟ್ರದ ವರಕವಿಗಳಾದ ಕೇಶವ ಸುತ, ಗೋವಿಂದಾಗ್ರಜರ ಕವನ ಸಂಗ್ರಹಗಳ ಓದಿನಿಂದ ಕಾವ್ಯಕ್ಕೆ ರಸ-ಛಂದಸ್ಸು-ಅಲಂಕಾರ ಅಗತ್ಯವೆಂದೆನಿಸಿದ್ದರೂ ಸಾಹಿತ್ಯದ ಸಕಲಾಂಗಗಳ ವಿಸ್ತೃತ ಹಾಗೂ ವ್ಯವಸ್ಥಿತ ಅಭ್ಯಾಸವಾದದ್ದು ೧೯೨೫ ರಲ್ಲಿ—ಅದೂ ಗೆಳೆಯರ ಗುಂಪಿನಲ್ಲಿ!

ಸಾಹಿತ್ಯ ಸಂಸ್ಕಾರವಿದ್ದವರಿಗೆಲ್ಲ ಆನಂದಕಂದರ ವ್ಯಕ್ತಿತ್ವವು ಅವರ ಕಲಾಕೃತಿಗಳ ವಿಸ್ತಾರ-ವೈವಿಧ್ಯಗಳ ಮುಖಾಂತರ ಅಚ್ಚಳಿಯದೇ ಬೆರಗುಗೊಳಿಸುವದು. ಒಂದು ಕಥಾರಂಗವೇ, ಕಾದಂಬರಿಯ ಕಲಾವಿಲಾಸವೆ, ಕಾವ್ಯಕುಂಜವೇ, ರಸವತ್ತಾದ ಸಂಪಾದಕೀಯವೆ, ಜನಪದ ಸಾಹಿತ್ಯಕ್ಕೆ ಮಾರುಹೋದದ್ದೆ, ಲಲಿತಕಲೆ ಸಂಶೋಧನೆಗಳಂತಹ ಒಂದಕ್ಕೊಂದು ತೀರ ವಿರುದ್ಧ ವಿಷಯಗಳ ಬಗ್ಗೆ ಆಸ್ಥೆಯೆ—ತೀರ ಅದ್ಭುತವೆನಿಸುವಷ್ಟು ಶ್ರೇಯ ತರು ಸರಸ್ವತಿಯ ಅಡಿದಾವರೆಯ ಉಪಾಸಕರು.

ಕನ್ನಡದ ಮಾಧುರ್ಯಕ್ಕೆ ಮುಗ್ಧರಾಗಿ ಅದರ ಏಳ್ಗೆಗಾಗಿಯೇ ಹೋರಾಡಬೇಕೆನ್ನುವವರು ಕಡಿಮೆ ಇಲ್ಲ. ಅಂತಹರು ಸಾಹಿತ್ಯ ಸೇವೆಗೆಂದು ಸಂಘ ಸಂಸ್ಥೆ ಕಟ್ಟಿಕೊಂಡು ಕೇವಲ ನುಡಿಯ ಬೆಡಗನ್ನು ತೋರಿಸಿ ಕೊಡ ಲೆಳಸಿದರೆ, ನಿತ್ಯ ಮಾತಿನಲ್ಲಿಯೂ ಅದೇ ಅಮೃತದ ಕೆನೆ ಇದೆ ಎಂದು ಬೆಟ ಗೇರಿಯುವರು ಎಲ್ಲ ಪಾರಿಭಾಷಿಕ ಶಬ್ದಗಳಿಗೂ ಪ್ರತಿ ಕನ್ನಡ ಪದ ಪ್ರಯೋ ಗಿಸುವ ರೂಢಿ ಇಟ್ಟುಕೊಂಡಿರುವರು. ನಮ್ಮ ನಿತ್ಯ ವ್ಯವಹಾರದ ಮಾತು ಕತೆಯಲ್ಲಿ ಮಹಾರಾಷ್ಟ್ರ, ಆಂಗ್ಲ, ಹಿಂದುಸ್ತಾನಿ, ಪೋರ್ತುಗೀಜ ಶಬ್ದಗಳು ಹೇರಳವಾಗಿ ಕೇಳಬರುತ್ತಿದ್ದರೂ–ವ್ಯವಹಾರಕ್ಕೆ ಅಡೆ ತಡೆಯಾದರೂ ಚಿಂತೆ ಇಲ್ಲವೆಂದು ಆನಂದಕಂದರು ಬಸ್‌ಕಂಡಕ್ಟರನೊಡನೆ, ಟಾಂಗಾವಾಲಾ ನೊಡನೆ, ಅಂಚೆಖಾತೆಯ ಪೇದೆಗಳೊಡನೆ, ಪಲ್ಯೆ–ಕಾಯಿ ಮಾರುವ ಬಾಗ ವಾನರ ಜೊತೆಯಲ್ಲಿ ಹಣ್ಣುಹಂಪಲು ಹೂ ಮಾರುವವರೊತನೆ, ಚಹದ ಅಂಗಡಿಯುವರೊಡನೆ, ರೈಲುನಿಲ್ದಾಣದ ಕೂಲಿಗಳ ಕೂಡ—ಕಡೆಗೆ ಹೋದಲ್ಲೆಲ್ಲ ಕನ್ನಡದ ಪರಿಶುದ್ಧತೆಯನ್ನು ತಮ್ಮ ಮಟ್ಟಿಗೆ ತೀರ ಪ್ರಾಮಾ ಣಿಕತನದಿಂದ ಕಾಯ್ದುಕೊಂಡು ಹೋಗುವಷ್ಟು ಕನ್ನಡಕ್ಕಾಗಿ ಎದೆ ಕಲ್ಲು ಮಾಡಿದ್ದಾರೆ. ಕನ್ನಡನುಡಿಯ ಪ್ರಚಾರವೇ ಕರ್ನಾಟಕ ಏಕೀಕರಣದ ಜೀವಾಳವೆಂದು ನೆರೆನಂಬಿ ಅದೇ ಲಹರಿಯಲ್ಲಿ ಅವರು 'ಕರ್ನಾಟಕ ಜನ ಜೀವನ' ವನ್ನು ಚಿತ್ರಿಸಿ ಕನ್ನಡ ಸಂಸ್ಕೃತಿಯ ಪರಂಪರೆ ಪರಮಿತಿ ತೋರಿಸಿ ಕೊಟ್ಟಿರುವರು. ಕನ್ನಡಿಗರನ್ನು ಋಣಬದ್ಧರನ್ನಾಗಿರಿಸಿರುವರು.

ಹೀಗೆ ಕನ್ನಡದ ಕಹಳೆ ಮೊಳಗಿಸಬೇಕೆನ್ನುವ ಆನಂದಕಂದರ ಸಾರ್ವ ಜನಿಕ ಭಾಷಣಗಳೂ ಅಷ್ಟೇ ಮಾರ್ಮಿಕ. ಸಂಸ್ಕೃತ ಹಾಗೂ ಹಳೆಗನ್ನಡದ ಗಾಢ ಪರಿಚಯವಿದ್ದರೂ ಹೊಸಗನ್ನಡದಲ್ಲಿ ಅವರು ವಿದ್ವತ್ಪೂರ್ಣವಾಗಿ ಮಾತಾಡುವಾಗ ಶಾಂತಕವಿಗಳಂತಹರ ಕಾವ್ಯವನ್ನು ಅರ್ಥಪೂರ್ಣವಾಗಿ ಹತ್ತು ಹದಿನೈದು ನಿಮಿಷ ಉದಾಹರಿಸಹತ್ತಿದರೆ ವಿದ್ಯಾಪಕ್ಷಪಾತಿಗಳು ತಲೆ ದೂಗುವರು. ಗೊತ್ತಿವೆಯೆಂದು ಬೇರೆ ಭಾಷೆಗಳ ಅವತರಣಿಕೆ ಎಳೆದು ತರುವ ಚಟವು ಕೃಷ್ಣಶರ್ಮರನ್ನು ಸೋಂಕಿಲ್ಲ. ಹಳೆಯ ಹಾದಿ ಸರಿ ಎನ್ನುವ ಕರ್ಮಠ ಪಂಗಡದವರಲ್ಲಿ ಶ್ರೀಯುತರಿಗೆ ಶ್ರದ್ಧೆ ಇದ್ದರೂ ಹೊಸದಕ್ಕೆ ಪೂರ್ಣ ಬಹಿಷ್ಕಾರವೇಕೆ ಎಂಬ ಜಾತಿಯೂ ಅವರದು!

ಸಾಹಿತ್ಯ ಸಾಹಿತ್ಯವೆಂದು ಹಗಲಿರುಳು ನಿರ್ಜೀವ ಗ್ರಂಥಗಳಲ್ಲಿಯೇ ಆದರ್ಶ ಜಗತ್ತಿನ ಮೃಗಜಲ ಕಾಣಬೇಕೆಂಬ ಹವ್ಯಾಸ ಕೃಷ್ಣಶರ್ಮರಿಗಿಲ್ಲ. ಪರಿಚಿತ ಗೆಳೆಯರೊಡನೆ ಅವರಿಗೆ ತಲೆತುಂಬ ಹರಟೆ, ಹೊಟ್ಟೆತುಂಬ ನಗೆ ಬೇಕು. ಸಂಗೀತ, ನೃತ್ಯ ವಾದನಗಳಂತಹ ಲಲಿತ ಕಲೆಗಳ ಚರ್ಚೆ ಎಂದರೆ ಅವರಿಗೆ ಯಾವಾಗಲೂ ಮೆಚ್ಚು. ಅಂತೇ ಏಕಾಂಗಿಯಾಗಿ ಮೌನದಿಂದಿರು ವಲ್ಲಿ ಬೆಟಗೇರಿಯವರಿಗೆ ಆಸ್ಥೆ ಇಲ್ಲ. ಮಾತಿನಲ್ಲಿ ಮೊದಲು ನಿಷ್ಠುರವೆನಿಸಿ ದರೂ ಚಿಂತೆ ಇಲ್ಲ ಎಂದು ಆತ್ಮವಂಚನೆ ಮಾಡಿಕೊಳ್ಳದೆ ಸರಿ ಎನಿಸಿದ್ದನ್ನು ಹೇಳುವರು. ಅಂತೇ ಗೆಳೆಯರೆಲ್ಲರಿಗೂ ಅವರ ಬಗ್ಗೆ ತಪ್ಪುಕಲ್ಪನೆಯು ಸುಳಿ ವಿಲ್ಲ. ಚಿರಪರಿಚಿತರೊಡನೆ ತಾಸೆರಡು ತಾಸು–ತಮ್ಮದೇ ಆದ ಕನ್ನಡದಲ್ಲಿ, ಏರುದನಿಯಲ್ಲಿ ಹಾವಭಾವಗಳೊಡನೆ ತರ್ಕದ ತೂಕದಲ್ಲಿ ಎಲ್ಲ ವಿಷಯಗಳ ಬಗ್ಗೆ ಅಷ್ಟೇ ಉತ್ಸಾಹದಿಂದ ಹರಟೆ ಹೊಡೆಯುವ ಪರಿಪಾಠವವರದು. ಮನೆಯಲ್ಲಿ ಆಗಾಗ ಮಕ್ಕಳೊಡನೆ ಆಟದಲ್ಲಿ ಸರಸಮಾತಿನ ಲಹರಿಯಲ್ಲಿ ಕಾಲಕಳೆಯುವದು ಅವರ ಪ್ರೀತಿಯ ವ್ಯವಸಾಯ. ಬೆಟಗೇರಿಯವರು ಎಲ್ಲ ರಿಗೂ ಎಷ್ಟೇ ಬೇಕಾಗಿದ್ದರೂ ಜನರನ್ನು ನಗಿಸುವದಕ್ಕಾಗಿ ಎಂದು ಅನವಶ್ಯಕ ವಿದೂಷಕತೆಗೆ ಮೊರೆಹೋಗರು. ಮಾತೆಂದರೆ ಮಾಣಿಕವೆಂಬಂತೆ ಎಷ್ಟೊ ಸಲ ಅವರು ಮೌನಿಯಾಗಿರುವದರಿಂದ ಹೊಸಬರಿಗೆ ಗಂಭೀರ ಪ್ರಕೃತಿ ಯವರೆಂದು ಸಂಶಯ ಬರುವದು ಸಹಜ.

ಕರ್ನಾಟಕದ ಸಾಮಾಜಿಕ ಜೀವನದಲ್ಲಿ ಸಮರಸವಾಗಿ, ಸಾಹಿತ್ಯ–ಪತ್ರಿಕಾ ವ್ಯವಸಾಯಕ್ಕೆ ಕಳೆಕಟ್ಟಿಸಿ, ಕನ್ನಡನುಡಿಯ ಪರಿಶುದ್ಧ ಬೆಳವಣಿಗೆ ಗಾಗಿ ಹಂಬಲಿಸಿ ಮನಮುಟ್ಟಿ ಪ್ರಯತ್ನಿಸುವ ಆನಂದಕಂದರಿಗೆ ಆದರ್ಶ ರೆನ್ನಲೇಬೇಕು. ಧ್ಯೇಯವಾದಿಗಳಾದ ಇಂತಹ ಇನ್ನೂ ಹಲವಾರು ಆನಂದಕಂದರಿಂದ ಕನ್ನಡ ನಾಡು–ನುಡಿಯ ಹೊಂಗನಸುಗಳು ನಿಜವಾಗಿಯೂ ವಾಸ್ತವರಂಗಕ್ಕಿಳಿಯಬೇಕು.

---

## ಕನ್ನಡದ ಕಲಾವಿದ

# ವಾಳ್ವೇಕರ ಹನುಮಂತರಾಯರು

ಅಂದು ಕರ್ನಾಟಕ ಕಾಲೇಜಿನ ಬಿ. ಎ. ತರಗತಿಯಲ್ಲಿ ಅಪೂರ್ವ ಜನಸಂದಣಿ. ವಾಳ್ವೇಕರರ ಹಾರ್ಮೋನಿಯಮ್ ವಾದನದ ನಿಕಟ ಪರಿಚಯವಿದ್ದ ಕಾಲೇಜಿನ ಹಾಗೂ ಹೊರಗಿನ ಸದ್ಗೃಹಸ್ಥರಿಂದಲೂ ಅಧ್ಯಾಪಕ ವರ್ಗ, ರಸಿಕ ವಿದ್ಯಾರ್ಥಿವಿದ್ಯಾರ್ಥಿನಿಯರಿಂದಲೂ ಆ ಭವ್ಯವರ್ಗವು ಕಿಕ್ಕಿರಿದು ತುಂಬಿ ಎಷ್ಟೋ ಜನರು ಸ್ಥಳಸಿಗದೆ ನಿರಾಶರಾಗಿ ಹೊರಗೇ ಕೇಳುತ್ತ ನಿಂತಿದ್ದರು. ಎಲ್ಲರ ಲಕ್ಷವು ಮಿಡಿನಾಗರದಷ್ಟು ಚಪಲವಾದ ಬೆರಳುಗಳ ಆ ಸುಂದರ ನರ್ತನದಲ್ಲಿಯೆ. ತಾವು ಯಾರು 'ಎಲ್ಲಿದ್ದೇವೆ' ಏನು ಕೇಳುತ್ತಿದ್ದೇವೆ ಎಂಬುದರ ಎಚ್ಚರವಿಲ್ಲದಷ್ಟು ಮಂತ್ರಮೋಹಿತರಾಗಿ ಗಂಡು ಹೆಣ್ಣುಗಳೆರಡೂ ಕೇಳುತ್ತಿದ್ದಾರೆ. ೧೯೪೯ನೇ ಡಿಸೆಂಬರ ೨೦ದಿನ ಸೊಬಗಿನ ಸಂಜೆಯು ಈ ಹಾರ್ಮೋನಿಯಮ್ ವಾದನದ-ವಾಳ್ವೇಕರರ ಕಾರ್ಯಕ್ರಮವು ಕೊನೆಗಂಡ ಮೇಲೆ ಹೇಗಾದರೂ ಈ ಮಾಯಾವಿಯ ಬಗ್ಗೆ ಹಾಗೂ ಇವರ ಕಲೆಯ ಬಗ್ಗೆ ತಿಳಿಯಬೇಕೆಂಬ ಉತ್ಕಟೇಚ್ಛೆ ನನಗಾಗಿದ್ದಿತು. ಆದರೆ ಸಂದರ್ಶನ ಪಡೆಯುವ ಶುಭ ಪ್ರಸಂಗವು ನನ್ನ ಗೆಳೆಯ ಬಿ. ಆರ್.ವಾಡಪ್ಪಿಯವರಿಂದ ಮೊನ್ನೆಮೊನ್ನೆ ಲಭಿಸಿತು. ದಕ್ಷಿಣ-ಉತ್ತರ ಹಿಂದುಸ್ತಾನಗಳೆರಡರಿಂದ ಅಭೂತಪೂರ್ವ ಮನ್ನಣೆ ಪಡೆದ ಶ್ರೀಯುತರು ತಮ್ಮ ನಚ್ಚಿನ ಕನ್ನಡ ವಾಣಿಯಲ್ಲಿಯೇ ಬೇಕಾದುದರ ಬಗ್ಗೆ ಸಂಕೋಚಪಟ್ಟುಕೊಳ್ಳದೆ ಕೇಳಿಕೊಳ್ಳಬೇಕೆಂದಾಗ, ನಿಜವಾಗಿಯೂ ಈ ಅಭಿಮಾನಿ ಕನ್ನಡಿಗನು ಹಿಂದುಸ್ತಾನಕ್ಕೆ ಭೂಷಣನೆಂದು ತಿಳಿದು ಪ್ರಶ್ನೆಗಳ ಸುರಿಮಳೆ ಪ್ರಾರಂಭಿಸಿದೆವು.

ಎಲ್ಲರಿಗೂ ಅಚ್ಚರಿ ಎನಿಸುವ ಮೊಟ್ಟಮೊದಲಿನ ಮಾತೆಂದರೆ ವಾಳ್ವೇಕರರು ಧಾರವಾಡ ಜಿಲ್ಹೆಯ ಅಣ್ಣೀಗೇರಿಯವರು. ಅಲ್ಲಿ ೧೯೧೧ನೇ ಜಾನ್ಸೆವಾರಿ ೬ನೇ ದಿನಾಂಕದಲ್ಲಿ ಹುಟ್ಟಿದರು. ಸಿರಿವಂತ ಮನೆತನಕ್ಕೆ ಸಂಬಂಧಿಸಿದವರು. ವಾಳ್ವೇಕರ ಹನುಮಂತರಾಯರ ತಂದೆ ಅಂತಹ ಕಲಾವಿದರಲ್ಲ.

ಸ್ವತಃ ಇವರ ಅಣ್ಣಂದಿರಾದ ರಾವಸಾಹೇಬರಾಘವೇಂದ್ರರಾವ ಇನಾಮತಿ
ಯವರಿಗಾಗಲಿ ಲಲಿತಕಲೆಯ ಆಕರ್ಷಣೆ ಕಡಿಮೆ. ವಾಳ್ವೇಕರರು ೭-೮
ವರ್ಷದವರಿದ್ದಾಗ ತಬಲಾ-ಬಾರಿಸುವ ಉತ್ಸುಕತೆಯಿಂದ ಲಿಪ್ಟನ್ ಚಹಾವ
ಪುಡಿಯ ಡಬ್ಬಿಯ ತಗಡಿನಿಂದ ಸುಸ್ವರ ಹೊರಡಿಸುವ ಹುಡುಗಪ್ರಯತ್ನ
ನಡೆಸಿದಾಗ ತಂದೆ ಗೋವಿಂದರಾಯರು ತಮ್ಮ ಹುಡುಗನು ಹೀಗೆಯೇ
ತಬಲಾ ಬಾರಿಸುತ್ತ ಬಾರಿಸುತ್ತ ನಾಟಕ ಕಂಪನಿಯವರ ಸಂಗಡ ಹೊರಡು
ವದೇ ನಿಶ್ಚಿತವೆಂದು ನಂಬಿ ಅವರ ಏಳ್ಗೆಯ ಬಗ್ಗೆ ನಿರಾಶೆಯನ್ನೇ ಹೊಂದಿ
ದ್ದರು. ಶಾಲೆಯಲ್ಲಿ ಕಲಿಯುವ ಕಡೆಗೆ ಅವರ ಲಕ್ಷವಿಲ್ಲದ್ದೂ ಇಂತಹ ಅವರ
ತಿಳಿವಳಿಕೆಗೆ ಕಾರಣವಾಗಿರಬಹುದು.

ಉತ್ಸಾಹ, ತಾಳ್ಮೆ ಎಂಬೆರಡು ಮೇಲ್ತರಗತಿಯ ಗುಣಗಳು ವಾಳ್ವೇಕರ
ರಿಗೆ ೭-೮ ವರ್ಷಗಳಿದ್ದಾಗಿನಿಂದ ಇಲ್ಲಿಯವರೆಗೆ ಹಾಗೂ ಮುಂದೆ ಅವರ
ಕಲೆಯ ಬೆಳವಣಿಗೆಗೆ ಸಹಾಯಕಾರಿ. ಅಣ್ಣಿಗೇರಿಯಲ್ಲಿಯೇ-ಚಿಕ್ಕ ಚಿಕ್ಕ
ಗೆಳೆಯರೊಡನೆ-ಗಜಾನನಉತ್ಸವ ನಾಡಹಬ್ಬದ ಕಾರ್ಯಕಲಾಪವನ್ನೇರ್ಪ
ಡಿಸಿ ಮೇಳ ಹೊಂದಿಸಿ ಎಷ್ಟೋ ವರ್ಷ ನಡಿಸಿಕೊಂಡು ಬಂದರು. ಮುಂದೆ
ಆಕಸ್ಮಾತ್ ೧೯೩೮ನೇ ಇಸ್ವಿಯಲ್ಲಿ ಹಿರಿಯರೊಡನೆ ವಿಜಾಪುರಕ್ಕೆ ಹೋದಾಗ
ಉಚ್ಚ ಶ್ರೇಣಿಯಲ್ಲಿದ್ದ ಸಂಗೀತಗಾರ ವಿಲಾಯತಖಾನರ ಕಚೇರಿನಡೆ
ಯಿತು. ವಾಳ್ವೇಕರರೇ ಹಾರ್ಮೋನಿಯಮ್ ನುಡಿಸಿದರು. ಬೆಚ್ಚಲಿಲ್ಲ,
ಬೆವರಲಿಲ್ಲ. ಮೈಯ್ಯಲ್ಲಿ ಸ್ವಲ್ಪವೂ ನಡುಕವಿರಲಿಲ್ಲ. ಅಣ್ಣಿಗೇರಿಯಲ್ಲಿದ್ದಾ
ಗಿನ ಹುಡುಗತನದ ಆತ್ಮವಿಶ್ವಾಸವೇ ಅಂದಿನ ಕಾರ್ಯದಲ್ಲಿ ಪ್ರಕಟವಾಗಿ
ಖಾನರ ಮೆಚ್ಚುಗೆಗೆ ಪಾತ್ರವಾದ ಮೇಲೆ ೧೩ ವರ್ಷದ ಆಗಿನ ವಾಳ್ವೇಕರರ
ಬಗ್ಗೆ ಜನಸಾಮಾನ್ಯರಿಗೆ ಅಭಿಮಾನವೆನಿಸಿದುದರಲ್ಲಿ ಅಚ್ಚರಿಏನು? ಮುಂದೆ
ಮಹಾರಾಷ್ಟ್ರದ ಕಲಾಕೇಂದ್ರವಾದ ಪುಣೆಯಲ್ಲಿ ಅಲ್ಲಾದಿಯಾಖಾನರ
ಸಂಮೋಹಕ ಸಂಗೀತದ ಪರಿಚಯವಾಯಿತು. ಧಾರವಾಡದಲ್ಲಿ ಫಯಾಜ
ಖಾನರಂತಹ ಸಂಗೀತ ವಿದ್ವಾಂಸರ ಮೇಳದಲ್ಲಿ ಹೆಚ್ಚಿನ ಹೆಸರೂ ಸಿಕ್ಕಿತು.
ಫಯಾಜಖಾನರಲ್ಲಿಯೆ ವಾಳ್ವೇಕರರ ಮೊಟ್ಟಮೊದಲ ಅಧ್ಯಯನವಾಗಿದ್ದು
ದರಿಂದ ಅವರಲ್ಲಿ ಇವರ ಗೌರವ ಬಹಳ. ಕೊನೆಗೆ ಪರದೇಶಕ್ಕೆ ಮೈಸೂರ
ಯುವರಾಜರು ಹೊರಟಾಗ ಔತಣ ಸಿಕ್ಕರೂ ಯಾವದೋ ಕಾರಣದಿಂದ

ವಾಳ್ವೇಕರರು ಪರದೇಶಕ್ಕೆ ಹೋಗುವ ಮನಸ್ಸು ಮಾಡಲಿಲ್ಲ. ಆದರೆ ಹೈದರಾಬಾದ, ಸಾಂಗಲಿ, ಮೈಸೂರ, ಸೊಂಡೂರ, ಮೊದಲಾದ ಸಂಸ್ಥಾನಗಳ ಮಹಾರಾಜರು ಎಷ್ಟೋ ಸಲ ಇವರನ್ನು ಕರೆಯಿಸಿ ಅಲೌಕಿಕ ಕಲೆಯ ಅಮೃತ ಉಂಡು ತಣಿದರು.

ಸಶಾಸ್ತ್ರ ಸಂಗೀತಕ್ಕೂ ಚಲಚ್ಚಿತ್ರಕ್ಕೂ ಅಜಗಜಾಂತರವೆಂದು ವಾಳ್ವೇಕರರ ಅಭಿಪ್ರಾಯ. 'ಕರ್ನಾಟಕಿ ಸಂಗೀತವೆಂಬುದು ಮೈಸೂರಲ್ಲಿ ಇಲ್ಲವೆ ಇಲ್ಲ. ಆದರೆ ಅದರ ಹೆಸರು ಕೇಳಿ ರಸಿಕರನ್ನು ರಂಜಿಸುವವರು ತೆಲಗು ತಮಿಳು ರಾಗಗಳನ್ನೇ ಹೇಳುತ್ತಿರುವರು. ನಿಜವಾದ ಸಂಗೀತದ ಉತ್ಪಾದಕರು ಪುರಂದರ ದಾಸರು' ಎಂದು ಎನ್ನುವರವರು ಪುರಂದರ ದಾಸರ, ಬೇಲೂರ ಕೇಶವದಾಸರ ಕಿನ್ನರಿ ನಾದಕ್ಕೆ ಮಾರುಹೋದ ವಾಳ್ವೇಕರರು ಮೊನ್ನೆ ಮೊನ್ನೆ ಮೈಸೂರ ಹರಿಮಂದಿರದ ಉದ್ಘಾಟನೆಗೆ ಆಮಂತ್ರಿತರಾಗಿ ಹೋಗಿ ಅಲ್ಲಿ ತಮ್ಮ ವಾದನದ ಅಪ್ರತಿಮ ರಸದೂಟವನ್ನು ಭಕ್ತರಿಗೆ ಒದವಿಸಿದರು. ಹೀಗೆ ಸ್ವತಃ ತಾವು ಹಾರ್ಮೋನಿಯಮ್ ವಾದನವನ್ನು ಜೀವಿತದ ಧ್ಯೇಯ, ಅದೊಂದು ಲಹರಿ ಎಂದು ಮೈಮರೆಸುವಷ್ಟು ಬೆಳೆಯಿಸಿಕೊಂಡಿದ್ದರೂ ಹನುಮಂತರಾಯರು ಧಾರವಾಡದ ನಾಡಹಬ್ಬ ಸಂಘಸಂಸ್ಥೆಗಳ ವಾರ್ಷಿಕೋತ್ಸವ ಮೊದಲಾದ ಸಾರ್ವಜನಿಕ ಚಟುವಟಿಕೆಗಳಲ್ಲಿ ಆಗಾಗ ಭಾಗವಹಿಸಿರುವರು. ಕನ್ನಡದ ಸೇವೆಯೇ ತಮ್ಮ ಗುರಿಯೆಂದು ತಿಳಿದಿರುವರು.

ವಾಳ್ವೇಕರರು ಹಾರ್ಮೋನಿಯಮ್ ನುಡಿಸುವಲ್ಲಿ ಪ್ರೌಢಿಮೆ ದೊರಕಿಸಿದಂತೆ ಚಿತ್ರಕಲೆ, ಸಂಗೀತ, ತಬಲಾ, ಸಿತಾರ ವಾದನಗಳಲ್ಲಿಯೂ ಪಳಗಿದ ಕೈ ಅಹುದು. ಹೀಗೆ ಕಲೆಗಳಲ್ಲಿ ಯಾರೂ ತಮ್ಮ ಕೈ ಹಿಡಿಯಲಾರರೆಂದು ಮನವರಿಕೆಯಾಗಿದ್ದರೂ ಮರೆತಾದರೂ ಯಾರಿಗೂ ಬಿರುಸುಮಾತಾಡಿದ್ದಿಲ್ಲ. ಹಾಗೆ ಮಹಾ ನಿಗರ್ವಿಯೂ ಅವರುಂಟು. ಬೇಕಾದಷ್ಟು ಸಲ ಚಹಾ, ಕೆಲವು ಕಟ್ಟು ಬೀಡಿ, ಒಂದು ಅಂದವಾದ ಸ್ವರಪೆಟ್ಟಿಗೆ, ಸರಸ ಪತ್ತೇದಾರಿ ಕಾದಂಬರಿ ದೊರೆತರೆ ಊಟಬೇಡ ನಿದ್ರೆಬೇಡ ಎಂಬ ಓಮರಖಾಯಾಮ್‌ನ ಪಂಥದವರು. ಆದರೆ ಎಷ್ಟೋ ಸಂಗೀತಗಾರರಂತೆ ಹೊಟ್ಟೆಯ

ಪಾಡಿಗಾಗಿ ಕಲೆಯನ್ನು ಬೀದಿಗೆ ಮಾರಲಿಕ್ಕೆ ಹಚ್ಚುವ ಚಿಲ್ಲರೆ ಮನಸ್ಸು ವಾಳ್ವೇಕರರಿಗಿಲ್ಲ. ಹೀಗೆ ಕನ್ನಡ ನಾಡು-ನುಡಿಯ ಪ್ರೇಮಿ ಹಾಗೂ ಭಾರತದ ಲಲಿತಕಲೆಗೆ ತಿಲಕಪ್ರಾಯರಾದಂಥ ವಾಳ್ವೇಕರ ಹನುಮಂತರಾಯರಿಗೆ ದೇವರು ಆಯುರಾರೋಗ್ಯವನ್ನು ದಯಪಾಲಿಸಿ ಭಾರತದ ಈ ಯಶಸ್ಸನ್ನು ಅನ್ಯದೇಶಗಳಿಗೆ ಮುಟ್ಟಿಸುವದಕ್ಕೆ ಅನುಕೂಲತೆ, ಸ್ಫೂರ್ತಿಯನ್ನು ಹೆಚ್ಚಾಗಿ ಒದವಿಸಲಿ ಎಂದು ನನ್ನ ಹಿರಿಯಾಸೆ.

---

## ನೃತ್ಯ ವಿಶಾರದ
## ಕುಲಕರ್ಣಿ ಶ್ರೀನಿವಾಸ

ನೀಳವಾದ ಕೂದಲು, ಹರವಾದ ಹಣೆ, ಕುತೂಹಲ ಸೂಸುವ ಕಾಂತಿಯುತ ಕಣ್ಣು, ನಸುದೊಡ್ಡ ಮೂಗು, ಸಾದುಗಪ್ಪು ಬಣ್ಣ, ತುಂಬಿದ ಮೈ, ನಗೆಹೂವಿನ ಮುಖಮುದ್ರೆ, ನಟವರನಿಗೆ ಉಚಿತವಾದ ಪ್ರಮಾಣಬದ್ಧ ಅವಯವ, ನಿರಾಡಂಬರ ಉಡುಪು, ಗಂಭೀರ ನಡಿಗೆ, ಎತ್ತರ ನಿಲವು........ ಮೊನ್ನೆ ಮೊನ್ನೆ ಕುಲಕರ್ಣಿ ಶ್ರೀನಿವಾಸರನ್ನು ನಾನು ಕಂಡದ್ದು ಹೀಗೆ. ಇಂತಹ ವ್ಯಕ್ತಿಯ ಸಹಜ ಪರಿಚಯಕ್ಕಾಗಿ ಯಾರೂ ತವಕಗೊಳ್ಳಬಹುದು. ತವಕಗೊಳ್ಳುವ ಭಾವ ಹೊರಹೊಮ್ಮಿದೊಡನೆ ಕುಲಕರ್ಣಿಯವರೇ ತಮ್ಮ ಗೆಳೆಯರಿಗೆ 'ಇವರ್ಯಾರು'? ಎಂಬ ಸ್ವಭಾವ ಸಿದ್ಧವಾದ ಸಲಿಗೆಯ ಪ್ರಶ್ನೆ ಕೂಡಲೇ ಹಾಕಿಬಿಡುವರು. ಒಮ್ಮೆ ಮಾತಿನ ಲಹರಿಗೆ ಬಿದ್ದರೆ ತೀರಿತು ಹವಾಮಾನದಿಂದ ಮೊದಲು ಮಾಡಿ ಕರ್ನಾಟಕ ಏಕೀಕರಣದ ವರೆಗಿನ ಸಮಸ್ಯೆಗಳೆಲ್ಲ ನಿರರ್ಗಳವಾಗಿ ಅವರ ಸರಣಿಯಲ್ಲಿ ತೂರಿಬರುವವು.

ಮಾತಿನ ಸಹಾನುಭೂತಿಯಷ್ಟೇ ಶ್ರೀನಿವಾಸರಿಗೆ ಹೃದಯದ ಸಹಾನುಭೂತಿಯೂ ಇದೆ ಎಂದು ಅವರ ಗೆಳೆಯರಿಗೆ ಗೊತ್ತುಂಟು. ಸ್ವತಃ ತಾವು ಬಡತನದಲ್ಲಿ ಬೆಳೆದುಬಂದುದರಿಂದ ಹೆರವರಿಗೆ ಸಹಾಯ ಸಲ್ಲಿಸಲು ಹಿಂದು ಗಳೆವವರಲ್ಲ. ಪ್ರೌಢಶಿಕ್ಷಣಕಾಲದಲ್ಲಿ ಏಕನಿಷ್ಠೆಯೊಡನೆ ಶ್ರೀನಿವಾಸರು ನಾಟ್ಯವಿಲಾಸಿ—ಸಾಹಿತಿಗಳ ಜೊತೆಯಲ್ಲಿ ಕಾರ್ಯ ನಿರ್ವಾಹಕ ಬುದ್ಧಿಯನ್ನೂ ಮೈಗೂಡಿಸಿಕೊಂಡರು.

ಬಿ. ಎ. ಆದಮೇಲೆ ಶ್ರೀನಿವಾಸರಿಗೆ ಸಾಹಿತ್ಯವ್ಯಾಸಂಗವು ತೀರ ಮೆಚ್ಚಿನದಾಯಿತು. ಪಂಡಿತ ತಾರನಾಥರು ಪ್ರೇಮ ಪತ್ರಿಕೆಯ ಸಂಪಾದಕೀಯದ ಎಲ್ಲ ಹೊಣೆ ಶ್ರೀನಿವಾಸರಿಗೆ ಬಿಟ್ಟುಕೊಟ್ಟು ಕೇವಲ ಸಲಹೆಗಾರರಾದ ಮೇಲೆ— ಹಿರಿಯರ ಹಾಗೂ ಗೆಳೆಯರ ಲೇಖನ ಕಡಿಮೆ ಎನಿಸಿದಾಗ—ಬರೆಯುವ

ಭಾಗ ಹೊಸ ಸಂಪಾದಕರ ಕೊರಳಿಗೇ ಬೀಳುತ್ತಿತ್ತು. ಅಂತೂ ವಿಮರ್ಶೆ ಯಿಂದ ಮೊದಲು ಮಾಡಿ ಅಭ್ಯಾಸ ಪೂರ್ಣ ಲೇಖನವನ್ನು ಬರೆಯುವದು ಕುಲಕರ್ಣಿಯವರಿಗೆ ಆಗತ್ಯವಾಗುತ್ತಿತ್ತು. 'ಕೆಟ್ಟಹಟ', 'ಎಡವಿದತಂಬಿಗೆ' ಗಳೆಂಬ ಸಾಮಾಜಿಕ ಪ್ರಹಸನಗಳು ಹಾಗೂ ನಾಟಕದ ಸವಿ ನೆನಹಿನ ಅಂದ ವಾದ ಪ್ರಬಂಧವು ಶ್ರೀಯುತರ ನಾಟ್ಯಸೇವೆಯ ಉತ್ಸಾಹದ ಉತ್ಕಟತೆ ಯನ್ನು ವ್ಯಕ್ತಪಡಿಸುವಂತಹವು. 'ಹಿಗಿನ್‌ಬೋಥಾಮ್ಸ' ಪುಸ್ತಕಾಲಯದಲ್ಲಿ ದೊರೆಯುವ ಪೆಂಗ್ವಿನ್ ಪೆಲಿಕನ್ ಮಾಲೆಯ ಸರಸಸಾಹಿತ್ಯವನ್ನು ಕೇವಲ ಪ್ರಚಾರಕ್ಕಾಗಿ ಸ್ವಲ್ಪ ಬೆಲೆಯಲ್ಲಿ ಜನಸಾಮಾನ್ಯರಿಗೆ ಕೊಡುವ ಆಂಗ್ಲರ ಪರಂಪರೆಯು ಒಮ್ಮೆ ಪ್ರೇಮದ ಸಂಪಾದಕರಿಗೆ ಹೊಳೆದೊಡನೆ ಅವರು ಪ್ರಕಟನೆಗಾರರಾದರು. ಹ. ಪಿ. ಜೋಶಿಯವರ ಭಾವಪ್ರಭಾತವೆಂಬ ಸೊಗಸಾದ ಕಥಾ ಸಂಕಲನ, ಶ್ರೀರಂಗರ ಕ್ರಾಂತಿಕಾರಕ ನಾಟಕ ಅ. ನ. ಕೃ. ರವರ ಮಾರ್ಮಿಕ ಏಕಾಂಕ ಸಂಗ್ರಹ, ಜೋಶಿಯವರ ಕಾಶ್ಮೀರದ ರಮ್ಯ ಪ್ರವಾಸ ಪ್ರಬಂಧ, ಚಂದ್ರನಾಥವೆಂಬ ಶರಚ್ಚಂದ್ರರ ರಸವತ್ತಾದ ಕಾದಂಬ ರಿಯ ಅನುವಾದ, ಪರಾಗವೆಂಬ ನಲ್ವಾಡಿನ ಸುಂದರ ಸಂಗ್ರಹ—ಮೊದ ಲಾದುವು ಕನ್ನಡ ಸಾರಸ್ವತ ಮಂದಿರದ ಸಿರಿ ಹೆಚ್ಚಿಸಿದವು, ರಸಿಕತೆ, ಸಾಹಿತ್ಯೋಪಾಸನೆಯ ದ್ಯೋತಕವೆಂಬಂತೆ ಸ್ವತಃ ಶ್ರೀನಿವಾಸರೇ ಸಂಪಿಗೆ, ದೀಪದ ಕೆಳಗೆ, ಅಡಾಲ್ಫ ಹಿಟ್ಲರ ಎಂಬ ಹೊತ್ತಿಗೆಗಳನ್ನು ಕನ್ನಡ ಜನತೆಗೆ ನೀಡಿದರು. ಮುಖ್ಯವಾಗಿ ಸತ್ವಯುತವಾದ ಶೈಲಿಗಾಗಲಿ, ವಿಚಾರದ ವಿಲಾಸ ಕ್ಕಾಗಲಿ, ಮಾನವ ಜೀವನದ ಏರಿಳಿತಗಳ ಸೂಕ್ಷ್ಮನಿರೀಕ್ಷೆಗಾಗಲಿ ಕುಲಕರ್ಣಿಯವರ ಕಲಾಕೃತಿಗಳು ಬೆರಳಿನಲ್ಲೆಣಿಸುವಷ್ಟಾದರೂ—ಎಲ್ಲರ ಹೃದಯಾಂತರಾಳದಲ್ಲಿ ಬಹುಕಾಲ ಉಳಿಯುವವೆಂದು ಎದೆ ತಟ್ಟಿ ಹೇಳ ಬಹುದಲ್ಲವೇ ?

೧೯೩೩ ರಲ್ಲಿ ಇನ್ನೂ ಕಾಲೇಜದ ಶಿಕ್ಷಣ ನಡೆದಿರುವಾಗ ಮೊಟ್ಟ ಮೊದಲು ನೃತ್ಯದ ಮೋಹವು ಶ್ರೀನಿವಾಸರನ್ನು ಆವರಿಸಿತು. ಮುಂಬಯಿ ವಿಶ್ವವಿದ್ಯಾಲಯದ ಬಿ. ಎ. ಆದಮೇಲೆ ಅವರಿಗೆ ನೈಜ ಸ್ವಾತಂತ್ರ್ಯ ಮಂದಿ ರದ ಮಹಾದ್ವಾರ ತೆರೆದಂತಾಯಿತೆಂದು ಹೇಳಬಹುದು.

ಆಮೇಲೆ ತಮ್ಮ ಜೀವನದಲ್ಲಿ ಹಾಸುಹೊಕ್ಕಾದ ನೃತ್ಯವ್ಯಾಸಂಗವೇನೊ ತಾವೇನೊ! ತಮ್ಮ ಮಗ ವಕೀಲನಾಗಿ ಹಣಗಳಿಸುವ ಹಾದಿ ಹಿಡಿಯಲಿ ಎಂದು ಹಿರಿಯರ ಮನೀಷೆ. ಆದರೆ ಶ್ರೀನಿವಾಸರು ನೃತ್ಯಕ್ಕಾಗಿಯೇ ಜನ್ಮ ತಳೆದಂತಿತ್ತೆಂದು ಪಾಪ ಅವರಿಗೇನು ಗೊತ್ತು? ಸರಿ ಮಲಬಾರದ ವಿದ್ವಾಂಸರ ಬಳಿ ಬಂದರು. ಭರತನಾಟ್ಯ ಹಾಗೂ ಇತರ ಮಾದರಿಗಳ ಅವ್ಯಾಹತ ಅಭ್ಯಾಸ ಕೈಕೊಂಡರು.

ರಾಷ್ಟ್ರದ ಕಲೆ ಮತ್ತು ಸಂಸ್ಕೃತಿಯನ್ನು ಅತ್ಯಂತ ಪರಿಣಾಮಕಾರಿಯಾಗಿ ಪ್ರತಿಬಿಂಬಿಸುವ ಪ್ರಮುಖ ಸಾಧನವೆಂದರೆ ನೃತ್ಯ ಎಂಬ ಶ್ರೀನಿವಾಸರ ಖಚಿತ ಅಭಿಪ್ರಾಯ. ಅದು ಬರಿ ಡೊಂಬರ ಕುಣಿತವಲ್ಲ. ಅದಕ್ಕೊಂದು ಶಾಸ್ತ್ರ ಉಂಟು. ಆಧ್ಯಾತ್ಮಿಕ ಹಿನ್ನೆಲೆ ಇದೆ. ಶ್ರೀಯುತರ ಕಲ್ಪನೆಯಂತೆ ಉಜ್ವಲ ದೇಶಾಭಿಮಾನಿಯು ತನ್ನ ರಾಷ್ಟ್ರದ ಮಹಾಕಾವ್ಯ—ಸಂಗೀತ ವಿದ್ಯೆಯಿಂದ ಸ್ಫೂರ್ತಿಗೊಂಡು ತಾಯ್ನಾಡಿನ ಏಳ್ಗೆಯ ಹೊಂಗನಸು ಕಾಣುವಂತೆ ನೃತ್ಯದಿಂದಲೂ ವಿವೇಕಿಯ ಹೃದಯವು ಅರಳುವುದು. ರಾಷ್ಟ್ರದ ಉದಾತ್ತ ಆದರ್ಶಗಳತ್ತ ಧಾವಿಸುವದು. ನೃತ್ಯದ ವೈಭವವು ದೇಶದ ಸಂಸ್ಕೃತಿಯ ಮಟ್ಟವನ್ನು ಅವಲಂಬಿಸಿರುವದರಿಂದ ವ್ಯಕ್ತಿಗೆ ಮೊದಲು ತನ್ನ ನಾಡಿನ ಅರಿವಾಗುವದು ಅವಶ್ಯ. ಇನ್ನು ಭಾರತದ ಸಾಂಸ್ಕೃತಿಕ ಐಸಿರಿ ಅಖಂಡ ವಿದೆಯೆಂದು ನೆರೆನಂಬಿದ ಶ್ರೀನಿವಾಸರು ಅದರ ಲಲಿತ ಕಲೆಗಳ ಪುನರುಜ್ಜೀವನೆಯಾಗಲೇಬೇಕು, ಅದರ ಉಪಾಸನೆ ತಮ್ಮ ಜೀವಿತದ ಧ್ಯೇಯವಾಗಲಿ ಎಂದು ಅಂದುಕೊಂಡರು.

ಅಂದದ್ದೇನೊ ಸರಿ ಎಂದು ಅಂದಮೇಲೆ ಜನ ಸಾಮಾನ್ಯರಂತೆ ಶ್ರೀನಿವಾಸರು ತಾತ್ಸಾರ ಮಾಡಿ ಮುಂದೆ ಕೈ ತುಂಬ ರೊಕ್ಕ ಗಳಿಸುವ ಮಾರ್ಗಕ್ಕೆ ಮೊರೆ ಹೋಗಿದ್ದರೆ ಆ ಮಾತೇ ಬೇರೆ ಆಗುತ್ತಿತ್ತು. ಆದರೆ "ಸಾಹಸೆ ಶ್ರೀಃ ಪ್ರತಿವಸತಿ" ಎಂದು ಜಪಿಸುವವರು ಅವರು ಸುಮ್ಮನೆ ಕುಳಿತಾರೆಯೇ? ಅಂತೇ ಭಾರತೀಯ ನೃತ್ಯದ ಪುನರುಜ್ಜೀವನೆಗಾಗಿ ನೃತ್ಯ ಭಾರತಿ ಎಂಬ ಸಂಸ್ಥೆಯನ್ನು ೧೯೩೯ ರಲ್ಲಿ ಸ್ಥಾಪಿಸಿದರು. ಅದರ ದಿಗ್ದರ್ಶಕರಾದರು. ಈ ಸಂಸ್ಥೆ ನಿರ್ಮಾಣವಾದಂದಿನಿಂದ ಇಂದಿನವರೆಗೆ ನೃತ್ಯ ಶಿಕ್ಷಣದ ಲಾಭ ಪಡೆದವರೆಷ್ಟೋ! ಇನ್ನು ಮುಂದೆಯೂ ಪಡೆಯುವವರಿದ್ದಾರೆ.

ಕೆಲವರಂತೂ ನೃತ್ಯವನ್ನು ವ್ಯವಸಾಯವಾಗಿಯೇ ಮಾಡಿಕೊಂಡಿರುವರು. ಇಂತಹ ೩೦ ಕಲೋಪಾಸಕರ ಮಂಡಲಿಯೊಡಗೂಡಿಕೊಂಡು ಶ್ರೀನಿವಾಸರು ಈಗಾಗಲೇ ಮುಂಬಯಿ, ಮದ್ರಾಸ, ಮೈಸೂರು, ಮಲಬಾರ, ಸಿಲೋನ, ಬ್ರಹ್ಮದೇಶಗಳ ಮುಖ್ಯ ಪಟ್ಟಣಗಳಲ್ಲಿ ಪ್ರವಾಸಮಾಡಿ ತಮ್ಮ ನೃತ್ಯ ಕಲೆಯ ಅಪ್ರತಿಮ ರಸದೂಟವನ್ನು ಜನತೆಗೆ ಒದವಿಸಿದ್ದು ಮೇಲ್ತರಗತಿಯ ಕಲಾಸೇವೆಯೆ !

ಕೇವಲ ನೃತ್ಯಭಾರತಿ ಸಂಸ್ಥೆ ಕಟ್ಟುವದರಿಂದ ಶ್ರೀನಿವಾಸರಿಗೆ ತೃಪ್ತಿ ಹೇಗೆ ಆದೀತು ? ಅದು ಬಹುಕಾಲ ಬಾಳಬೇಡವೆ ? ತನ್ನಕಾಲಮೇಲೆ ತಾನು ನಿಲ್ಲಬೇಡವೇ ? ಲಲಿತಕಲೆಗಳ ನಿರಂತರ ಆಗರವೆನಿಸಿ ಜನಜನಿತವಾಗಬೇಡವೇ ಅದು ? ಅಂತೆಯೇ ನವಂಬರ ಜನವರಿಯಿಂದ ನಾಲ್ಕು ತಿಂಗಳು--ಮುಂಬಯಿ, ಬಂಗಾಳ, ಸಂಯುಕ್ತಪ್ರಾಂತಗಳ ಮುಖ್ಯ ಪಟ್ಟಣಗಳ ಪ್ರವಾಸದ ದೊಡ್ಡ ಯೋಜನೆ ಕೈಕೊಂಡಿರುವದು. ನೃತ್ಯಭಾರತಿ ಎಂಬ ಹೆಸರಿನ ಆಂಗ್ಲ ತ್ರೈಮಾಸಿಕ ಹೊರಡಿಸಿ ಲಲಿತಕಲೆಗಳ ಏಳ್ಗೆಗಾಗಿ ಹೆಣಗುವದು ಮತ್ತೂ ಯಕ್ಷಗಾನದ ವೈಶಿಷ್ಟ್ಯ ಕಲಿಸುವದು ಈ ಪ್ರವಾಸದ ಮೂಲ ಧ್ಯೇಯಗಳು.

ಶ್ರೀನಿವಾಸ ಹಾಗೂ ಸಂಗಡಿಗರ ನೃತ್ಯಕಲೆಯಜೀವಾಳ ಅವರ ಪ್ರಯೋಗಗಳಲ್ಲಿ ಹುದುಗಿದೆ. ಅವುಗಳಲ್ಲಿ ಎಂತಹ ವೈವಿಧ್ಯ, ಸೊಬಗು, ಸಹಜತೆ ! ಅವನ್ನು ಬಿಡಿಬಿಡಿಯಾಗಿ ರಂಗಭೂಮಿಯ ಮೇಲೆ ನೋಡಿದಾಗಲೇ ಆನಂದ. ಆಗ ಭಾರತೀಯ ನೃತ್ಯಕಲೆಯ ವಿಲಾಸ ರಸಿಕಪ್ರೇಕ್ಷಕವರ್ಗದ ಕಣ್ಣಲಿ ಕುಣಿವುದು. ನಮ್ಮ ಸಾಂಸ್ಕೃತಿಕ ಏಸಿರಿಗಾಗಿ ಹೆಮ್ಮೆಯ ಹೊಳೆ ತುಳುಕಾಡುವದು. ಕುಲಕರ್ಣಿಯವರ ನೃತ್ಯಗಳಲ್ಲಿ ರಂಗಪೂಜೆಗೆ ಪ್ರಾಮುಖ್ಯತೆ. ಏಕೆಂದರೆ ಅದೇ ಮೊದಲು ಎಂದು ರಂಗಭೂಮಿಯ ಪರಿಚಯವಿದ್ದವರಿಗೆ ಹೇಳಬೇಕಿಲ್ಲ. ಈಶಸ್ತವನ, ರಂಗಭೂಮಿ ಹಾಗೂ ಪ್ರೇಕ್ಷಕರಿಗೆ ನಮಸ್ಕಾರ ಅದರ ಗುರಿ. ಕಾಮದೇವನೆಂಬ ಪ್ರಥಮ ನೃತ್ಯದಲ್ಲಿ ಪ್ರೇಮದ ಅಧಿದೇವನಾದ ಕಾಮನನ್ನು ಇಂದ್ರನು ಶಿವನ ತಪೋಭಂಗಕ್ಕಾಗಿ ಕಳಿಸುವನು. ಮನ್ಮಥನ ವೇಷ, ಸೈನ್ಯ ಯಾರಿಗೆ ಗೊತ್ತಿಲ್ಲ ? ಹೂ, ಚಿಗುರೆಲೆ, ಕೋಗಿಲೆ, ಸೊಬಗುಗಾತಿಯರು ಅವನ ಬೆನ್ನುಹತ್ತುವರು.

ಕಾಮನ ನಚ್ಚಿನಮಡದಿ ರತಿದೇವಿ ' ಹಿಂತಿರುಗು ಹಿಂತಿರುಗು, ' ಎಂದು ಒಂದೇಸಮನೆ ತನ್ನ ಇನಿಯನಿಗೆ ಅಂಗಲಾಚಿ ಬೇಡಿಕೊಳ್ಳುವಳು. ಆದರೇನು ? ಅವನದು ವಜ್ರ ಮನಸ್ಸು. ಯುದ್ಧದಲ್ಲಿ ಕಾಮನ ಬಾಣಗಳ ಸುರಿಮಳೆಯಾಯಿತು. ಮರುಕ್ಷಣ ಶಿವನ ಕಣ್ಣು ಕೆಂಡದಂತಾಯಿತು. ಕಾಮನು ಸುಟ್ಟು ಭಸ್ಮವಾದನು. ಗ್ರಾಮನೃತ್ಯವು ಹೆಸರೇ ಸೂಚಿಸುವಂತೆ ಹಳ್ಳಿವಾಡದವರಿಗೆ ಸಂಬಂಧಿಸಿದ್ದು. ಸುಗ್ಗಿ ಅಡಿ ಇಡುತ್ತಿದೆ. ಬೆಳೆ ಕೊಯ್ಯುವವರು ಉನ್ಮಾದದಲ್ಲಿ ಲೋಲಾಡುತ್ತಿದ್ದಾರೆ. ಎಲ್ಲೆಡೆ ಮನೋಹರ ಬೆಳದಿಂಗಳು. ಇಂಥ ಸಮಯದಲ್ಲಿ ಒಕ್ಕಲಿಗರ ನೃತ್ಯಕ್ಕೆ ಪ್ರಾರಂಭ. ಬೆಳೆ ಕೊಯ್ಯುವುದು, ಸಿವುಡು ಕಟ್ಟುವುದು ನಡದೇ ಇರುವವು. ' ಹಳ್ಳಿಯಲ್ಲಿಯೇ ಒಬ್ಬ ಉಂಡಾಡಿಗ ನಿರುದ್ದಿಶ್ಯ ತಿರುಗುವಾಗ ಒಮ್ಮೆ ಒಂದು ಗುಬ್ಬಿಗೆ ಗುರಿಯಿಟ್ಟು ಕಾವಣಿ ಬೀಸುವನು. ದುರ್ದೈವದಿಂದ (?) ಗುರಿ ತಪ್ಪುವುದು. ಆದರೆ ಮರುಕ್ಷಣ ಅದೇ ದಾರಿಗುಂಟ ಒಬ್ಬ ಹುಡಿಗಿ ಹಾಯ್ದುಹೋಗುವದು ದಿಟ್ಟಿಗೆ ಬೀಳುವದು. ಯುವಕನಿಗೆ ಕ್ಷಣಾರ್ಧ ದಿಗಿಲು. ಬೇರೊಂದು ಬಗೆಯ ಆಟವೇ ಅವನಿಗೆ ತಲೆದೋರುವದು. ಆದರೆ ಆಕೆ ಅವನಿಗೆ ಸದ್ಬುದ್ಧಿಯನ್ನು ಕಲಿಸುವಳು. ' ಆನೆಸಿರಾವೆ ' ಎಂಬ ತಲೆಕಟ್ಟಿನ ಈ ನೃತ್ಯವು ನಿಜವಾಗಿಯೂ ರಂಜಕ ಹಾಗೂ ಚಿತ್ರಮಯವಾಗಿರುವದಿಲ್ಲವೇ ? ಹಾವಾಡಿಗನು ಬುಟ್ಟಿಯಲ್ಲಿ ಹಾವನ್ನಿರಿಸಿಕೊಂಡು ತಿರುಗುವದು ಒಂದು ಸಾಮಾನ್ಯ ದೃಶ್ಯ. ದಿನದ ಹೊಟ್ಟೆಯ ಪಾಡಿಗಾಗಿ ಆ ಭಯಾನಕ ಪ್ರಾಣಿಯೊಡನೆ ಸಲಿಗೆ ಬೆಳೆಸುವದು ಅವನ ಕರ್ತವ್ಯವಾಗಿದೆ. ಶ್ರೀನಿವಾಸರು ಈ ಕಲ್ಪನೆಯನ್ನು ಅಂದವಾಗಿ ಪ್ರದರ್ಶಿಸುವರು. ಶ್ರೀನಿವಾಸ ಹಾಗೂ ಸಂಗಡಿಗರ ಇನ್ನೊಂದು ರಸವತ್ತಾದ ನೃತ್ಯವೆಂದರೆ ರಾಸಲೀಲೆ. ಯಮುನಾ ತಟದಲ್ಲಿ ಶ್ರೀಕೃಷ್ಣನು ತನ್ನ ಗೆಳೆಯರೊಡನೆ ವಿವಿಧ ಆಟಗಳಲ್ಲಿ ತೊಡಗಿರುವ. ಆಗ ಗೋಪಿಕಾಸ್ತ್ರೀಯರು ಸ್ನಾನಕ್ಕೆಂದು ಅಲ್ಲಿಗೇ ಬರುವರು. ದಂಡೆಯ ಮೇಲೆ ಬಿಟ್ಟುಹೋದ ಅವರ ಸೀರೆಗಳನ್ನು ತೆಗೆದುಕೊಂಡು ಕೃಷ್ಣನು ಉಪಹಾಸಕ್ಕೆಂದು ಬಚ್ಚಿಡುವನು. ಅಸಹಾಯರಾದ ಗೋಪಿಯರು ಹುಡುಕಿ ಹುಡುಕಿ ದಿಗ್ಭ್ರಾಂತರಾಗುವರು. ಕೊನೆಗೆ ಕೃಷ್ಣನು ಅವರಿಗೆ ವಸ್ತ್ರ ಸಲ್ಲಿಸುವನು. ಇದೀಗ ಶ್ರೀಕೃಷ್ಣನ ಅಮರ ಮುರಲೀನಾದಕ್ಕೆ ಮೋಹಿತರಾದ ಗೋಪಿಕಾ

ಸ್ತ್ರೀಯರ ಸಾಮೂಹಿಕ ನೃತ್ಯ. ಮುಂಜಾವಿನ ಮಂಗಲ ಸಮಯದಲ್ಲಿ ಒಮ್ಮೆ ಶಿವನು ತನ್ನ ಅರ್ಧಾಂಗಿಯಾದ ಪಾರ್ವತಿಯೊಡನೆ ಅತ್ಯಾನಂದ ಪುಲಕಿತನಾಗಿ ಕುಣಿಯುವನು. ಆಗ ದೇವತೆಗಳ ಹಿಮ್ಮೇಳದ ಇನಿದನಿ ಹೊರಹೊಮ್ಮುತ್ತಿರುವುದು. ಬ್ರಹ್ಮನು ಮೃದಂಗ ಬಾರಿಸುವನು. ವಿಷ್ಣುವಿನ ವೇಣುವಾದನ, ಸರಸ್ವತಿಯ ವೀಣಾವಾದನ, ಲಕ್ಷ್ಮಿ ತಾಳ ಹಿಡಿಯುವದು, ಗಣಪತಿ-ಷಣ್ಮುಖ ಇನ್ನಿತರ ಭೂತಗಣಗಳು ಬೇರೆ ಬೇರೆ ವಾದ್ಯವಾದನದಲ್ಲಿ ತಲ್ಲೀನರಾದಾಗಿನ ಶಿವನ ಈ ನೃತ್ಯಕ್ಕೆ 'ಶಿವಲಾಸ್ಯ' ವೆಂದು ಹೆಸರು. 'ಕಿರಾತಾರ್ಜುನೀಯ' ವೆಂಬ ಶ್ರೀನಿವಾಸರ ಇನ್ನೊಂದು ನೃತ್ಯ ಪ್ರಸಂಗದಲ್ಲಿ ಅರ್ಜುನನು ಪಾಶುಪತಾಸ್ತ್ರ ದೊರಕಿಸುವುದಕ್ಕೆ ತಪಸ್ಸು ಮಾಡುತ್ತಿರುವನು. ಅವನ ಸತ್ವಪರೀಕ್ಷೆಗೆಂದು ಕಿರಾತ ವೇಷದ ಶಿವ ಪಾರ್ವತಿಯರ ಆಗಮನವಾಗುವದು. ಶಿವ-ಅರ್ಜುನರು ಒಂದೇ ಕಾಡ ಹಂದಿಯನ್ನು ಏಕಕಾಲಕ್ಕೆ ಗುರಿಯಿಟ್ಟು ಕೊಲ್ಲುವರು. ಇಬ್ಬರಲ್ಲಿ ಯಾರು ಮೊದಲು ಕೊಂದರೆಂದು ನಿರ್ಧರಿಸಲಾಗದಿದ್ದುದಕ್ಕೆ ಯುದ್ಧದ ಪ್ರಸಂಗ ಬರುವದು. ಅಂತೂ ಇಬ್ಬರೂ ಕಾಳಗಕ್ಕಿಳಿಯುವರು. ಯುದ್ಧದಲ್ಲಿ ಅರ್ಜುನನಿಗೆ ಮೂರ್ಛೆಯುಂಟಾಗುವದು. ಪಾರ್ವತಿ ದಯೆದೋರಿ ಹರಿಸಿದ್ದರಿಂದ ಅರ್ಜುನನು ಏಳುವನು. ಆಗ ಶಿವನನ್ನು ಪ್ರಾರ್ಥಿಸಿ ಅವನ ಮೂರ್ತಿಯ ಮೇಲೆ ಹೂಗಳನ್ನೇರಿಸುವನು. ಆದರೆ ಆ ಹೂಗಳು ಎದುರಿಗಿದ್ದ ಬೇಡನ ತಲೆಯ ಮೇಲೆ ಕೂಡ್ರುವವು. ಎಂತಹ ಸೋಜಿಗ! ಕೂಡಲೇ ತನ್ನ ದೋಷ ತನಗೆ ತಿಳಿದು ಅರ್ಜುನನು ಶಿವಪಾರ್ವತಿಯರಿಗೆ ನಮಸ್ಕರಿಸುವನು. ತತ್‌ಕ್ಷಣ ಶಿವನು ಅರ್ಜುನನಿಗೆ ಪಾಶುಪತಾಸ್ತ್ರ ಕೊಡುವನು. ತನ್ನ ಶತ್ರುವಾದ ದುಶ್ಶಾಸನನ ಮೇಲೆ ಸೇಡುತೀರಿಸಿಕೊಳ್ಳುವದಕ್ಕೆಂದು ಭೀಮಸೇನನು ರಣರಂಗದಲ್ಲಿ ಅವನ ಕರುಳು ಬಗೆದು ರಕ್ತ ಕುಡಿದ. ಮಹಾಭಾರತದ ಈ ದೃಶ್ಯವು 'ರೌದ್ರಭೀಮ' ವೆಂದು ಪ್ರಸಿದ್ಧವಾಗಿದೆ. ಭಾಗವತದಿಂದ ಉದ್ಧೃತವಾದ ಕೊನೆಯ ನೃತ್ಯಪ್ರಸಂಗವು 'ಪೂತಣಿ ಸಂಹಾರ' ವೆಂದು ಹೆಸರಾಗಿದೆ. ಗೋಪಿಕೆಯ ವೇಷದಿಂದ ಪೂತಣಾ ರಕ್ಕಸಿಯು ಬಂದು ಶ್ರೀಕೃಷ್ಣನಿಗೆ ವಿಷದ ಮೊಲೆಯುಣಿಸುವಳು. ಪರಮಾತ್ಮಸ್ವರೂಪಿ ಕೃಷ್ಣನು ಹಾಲು ಕುಡಿಯುವಾಗಲೇ ಆಕೆಯ ಪ್ರಾಣ ಹೀರಿ ಬಿಡುವನು. ಇತ್ತೀಚೆಗೆ ಶ್ರೀಯು

ತರು ಹೊಂದಿಸಿದ ಮೇಳ ನೃತ್ಯಗಳಲ್ಲಿ ಅರುಣಗಿರಿ, ಮೇನಕಾ ಮುಂತಾದ ನೃತ್ಯ ನಾಟಿಕೆಗಳು ನೃತ್ಯರಂಗದಲ್ಲಿ ವಿಶೇಷ ಮನ್ನಣೆ ಪಡೆದಿವೆ.

ಶ್ರೀನಿವಾಸರಂತಹ ಸುಶಿಕ್ಷಿತ ಹಾಗೂ ಸುಸಂಸ್ಕೃತ ತರುಣಕನ್ನಡಿಗರು ಇಂದು ಭಾರತೀಯ ನೃತ್ಯ ಪರಂಪರೆಯ ಪುನರುಜ್ಜೀವನೆಗಾಗಿ ಹಗಲಿರುಳು ಮನಮುಟ್ಟಿ ಯತ್ನಿಸುವಾಗ ಅವರ ಆಕಾಂಕ್ಷೆ ಈಡೇರುವದು ಏನು ದೊಡ್ಡ ಮಾತು? ಅದರ ಪ್ರತೀಕವೇ ಧಾರವಾಡದಲ್ಲಿ ಆಗಲಿರುವ ಶ್ರೀನಿವಾಸರ "ಸಂಗೀತ-ನೃತ್ಯಕಲಾ ಕೇಂದ್ರ"!

---

# ಪ್ರೊ. ವಿ. ಕೃ. ಗೋಕಾಕ್

ಅಂದು ಗದುಗಿನ ಸರಸ್ವತಿ ನಾಟ್ಯಮಂದಿರದಲ್ಲಿ ಅಪೂರ್ವ ಜನ ಸಂದಣಿ. ಮುಂಬಯಿ ವಿಶ್ವವಿದ್ಯಾಲಯದ ಎಂ. ಎ. ಪರೀಕ್ಷೆಯಲ್ಲಿ ಇಂಗ್ಲೀಷ್ ಮುಖ್ಯ ವಿಷಯವಾಗಿಟ್ಟುಕೊಂಡು ಮೊದಲನೆ ತರಗತಿಯಲ್ಲಿ ಬಂದ ಗೋಕಾಕರಿಗೆ ಸನ್ಮಾನ. ಮುಂದೆ ಒಂದೇ ವಾರದಲ್ಲಿ ಶ್ರೀಯುತರು ಪರದೇಶಕ್ಕೆ ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಹೊರಡುವರೆಂದು ಜಿ. ಬಿ. ಜೋಶಿ ಅವರು ತಮ್ಮ ಅಲೌಕಿಕ ಕಲ್ಪನಾಚಿತ್ರಕತೆಯಿಂದ ಅತಿಥಿಗಳ ಹೃದ್ಗತ ಬಣ್ಣಿಸಿದರು. ಇಂಗ್ಲಂಡಿನಲ್ಲಿಯ ವೆಸ್ಟ್‌ಮಿನಿಸ್ಟರ್ ಆ್ಯಬೆಯಲ್ಲಿ ಅಮರತ್ವವನ್ನೈದಿದ ಕೀಟ್ಸ್, ಬಾಯರನ್, ಶೆಲಿ, ಮಿಲ್ಟನ್‌ರಂತಹರ ಸಂದರ್ಶನಕ್ಕಾಗಿ ಗೋಕಾಕರು ಹಾತೊರೆಯುತ್ತಿರಬಹುದು. ಇಲ್ಲವೇ ನಾಟ್ಯಾಚಾರ್ಯ ಷೇಕ್ಸಪಿಯರಿನ ಹುಟ್ಟಿದಮನೆ ನೋಡಲು ಹೊರಟಿರಬಹುದು. ವೇಳೆಯೇ ಹಣವೆಂದು ಲಾಗಹಾಕುತ್ತಿರುವ ಆಂಗ್ಲರ ನೈಪುಣ್ಯ, ಕಲಾವಿಲಾಸ, ಸುಸಂಘಟನೆ, ಆದರ್ಶಸಾಮಾಜಿಕ ಜೀವನ — ಮೊದಲಾದವುಗಳನ್ನು ಪರಕಿಸುವ ಧ್ಯೇಯದಿಂದ ಪ್ರೇರಿತರಾಗಿ ಪ್ರವಾಸ ಕೈಕೊಂಡಿರಬಹುದು. ಹೀಗೆ ವಿಚಾರದ ಮೋಡಗಳ ಪೊರೆಪೊರೆಯೊಳಗೆ ಪರಿಚಯಕಾರರು ತಲ್ಲೀನರಾಗಿ ಮಾತಿನ ಕೊನೆಗೆ ತಮ್ಮ ಪೀಠವನ್ನಲಂಕರಿಸಿದಾಗ ಗೋಕಾಕರು ಸ್ಥೈರ್ಯದಿಂದ ಅಚ್ಚುಕಟ್ಟುತನದಿಂದ ಮೇಲಕ್ಕೆದ್ದರು. ಎಲ್ಲರ ಕಣ್ಣುಗಳು ಉತ್ಸುಕತೆಯಿಂದ ಅವರ ವ್ಯಕ್ತಿತ್ವದಲ್ಲಿಯೇ ನೆಟ್ಟಿದ್ದವು. ಉಪನ್ಯಾಸವು ಪ್ರಾರಂಭವಾಗಿ ಶಬ್ದ ಪ್ರವಾಹವು ಜಲಪಾತವಾಗಿದ್ದಾಗ ಆಗಿನ ಸುಶಿಕ್ಷಿತ ಶ್ರೋತೃವೃಂದವು–ಗಾರುಡಿಗನ ಪುಂಗಿಯ ನಾದಲೀಲೆಗೆ ಮನಸೋತ ಸರ್ಪವು ಹೆಡೆಮೂಗುವಂತೆ–ತಲೆದೂಗುತ್ತಿದ್ದಿತು. ಭಾವಲೋಕದಲ್ಲಿ ಎಲ್ಲರೂ ನಕ್ಷತ್ರ ಮಾಲೆಗೇ ಕೈಹಾಕಿದ್ದರು. ಇಂತಹ ಅಸದೃಶ ಕರ್ಣಪೀಯೂಷದಿಂದ ತಣಿದ ಸಭೆಯು ಎಲ್ಲೆಡೆಯಲ್ಲಿಯೂ ನೀರವತೆ—ಅಲ್ಪ ಸದ್ದನ್ನೂ ತೋರಿಸಿಕೊಡುವಂತಹದು! ಭಾಷಣವು ಪೂರ್ತಿಯಾದಾಗ ಕೇವಲ ಕಿವಿ

ಗಡಚಿಕ್ಕಿಸುವ ಸದ್ದಿನ ಹೊರತೂ ಏನೂ ಇರಲಿಲ್ಲ. ಅಂದಿನ ಸನ್ನಿವೇಶದಿಂದಲೇ ನಾನು ಪ್ರೊ. ಗೋಕಾಕರಲ್ಲಿ ಗೌರವ ತಳೆದುದು. ಅವರ ವ್ಯಕ್ತಿತ್ವದ ಹೆಚ್ಚು ಕಲ್ಪನೆ ಮಾಡಿಕೊಳ್ಳಲು ಹೆಣಗಿದ್ದು.

ವಿನಾಯಕರಾಯರ ವ್ಯಕ್ತಿತ್ವಕ್ಕೆ ಸಾಹಿತ್ಯಸೇವೆ ಎಷ್ಟೋಮಟ್ಟಿಗೆ ಮೆರುಗನ್ನಿತ್ತಿದೆ. ವೈವಿಧ್ಯ--ರಸಿಕತೆ ಅವರ ಜೀವನದ ಉಸಿರು. ಹೃದಯದ ಕಳಕಳಿ, ಪದಲಾಲಿತ್ಯ, ಭಾವನೆಯ ಉತ್ಕಟತೆ, ಸ್ಫೂರ್ತಿಯ ಕಾರಂಜಿಯಿಂದ ರೂಪಗೊಂಡ ಒಂದ ನಾಡಗೀತೆಯೆ? ಸಮಾಜದ ವಿಷಮತೆಯ ಪಡಿನೆಳಲು, ಕರ್ನಾಟಕ ಮಹಾರಾಷ್ಟ್ರಗಳ ಸಂಸ್ಕೃತಿಗಳ ಮಧುರ ಸಮ್ಮಿಲನ ಪಾತ್ರಪರಿಪೋಷಣೆಯ ವಿಲಾಸ ಬೀರುವ ಸಾಮಾಜಿಕ ಕಾದಂಬರಿಯೆ? 'Travel as a part of education'—ಎಂದು ಗಂಟಲು ಹರಿದುಕೊಂಡು ವಾಸ್ತವ ಪ್ರಪಂಚದಲ್ಲಿ ಏನನ್ನೂ ಸಾಧಿಸದೆ ತಲೆ ತಲೆ ಹೊಡೆದುಕೊಂಡು ಕೊನೆಗೊಮ್ಮೆ ಅದನ್ನೇ ಕೆಡಿಸಿಕೊಳ್ಳುವ ಗತಿಗೆಟ್ಟ ಸುಧಾರಕರಿಗೆ (?) ಆಹ್ವಾನಕೊಡುವ ಪ್ರವಾಸ ಸಾಹಿತ್ಯವೆ? ಬ್ರಿಟಿಷ್ ದ್ವೀಪಗಳ ನಿಸರ್ಗ ಸೌಂದರ್ಯ, ವಿದ್ಯುದ್ವೇಗದ ರಭಸದ ಜೀವನ, ಕಲೋಪಾಸನೆಯ ನಿರೂಪಣೆಯೆ? ಸೌಂದರ್ಯಾಧಿದೇವತೆ ಎನಿಸುವ ಕೋಗಿಲೆಯನ್ನು ನೆರೆಯಲ್ಲಿಟ್ಟುಕೊಂಡು ಅಡವಿ ಅಡವಿ ಅರಸುವದಕ್ಕೆ ಅಲೆದಾಡಿ, ಕವಿಗಳ ಮೇಲೆ ಹರಿಹಾಯ್ದು ಕೊನೆಗೆ ರಸಿಕತೆ ತಂದುಕೊಳ್ಳುವ ಹರಟೆಯೆ?—ಎಲ್ಲಕ್ಕೂ ಶ್ರೀಮಾನ್ ಗೋಕಾಕರ ಬುದ್ಧಿ ಕೇಂದ್ರ. ಅದಕ್ಕೆ ನಿಲುಕದ ಸಾಹಿತ್ಯಸ್ವರೂಪ ವಾವುದು ಎಂದು ಕೇಳದೇ ಗತ್ಯಂತರವಿಲ್ಲ.

ಮಾತಿನಲ್ಲಿ ರಂಜನೆ ಎನಿಸುವಂತೆ, ಬುದ್ಧಿಯ ಬೆಳಕು ಬೀಳುವಂತೆ ಇಡೀ ಆಂಗ್ಲ ಸಾಹಿತ್ಯದ ಅದ್ಭುತರಮ್ಯವಾದ ವಿಹಂಗಮ ನೋಟಕೊಟ್ಟು ಹರಟೆ ಹೊಡೆಯುವುದು ವಿನಾಯಕರಾಯರ ಸ್ವಭಾವ ವಿಶೇಷ. ಪರಿಚಯವಾದೊಡನೆ ಮೊದಲು ತಾಸೆರಡು ತಾಸು ಸಾಮಾನ್ಯ ಚರ್ಚೆ. ಆಮೇಲೆ ತಲೆಹರಟೆ. ವಿನಯವಂತೂ ಪ್ರೊಫೆಸರರಿಗೆ ರಕ್ತಗತ. ಹೊಸ ಸಾಹಿತಿ—ಆದರಲ್ಲಿಯೂ ತರುಣ ಬರೆಹಗಾರರ ಮೋರೆ ನೋಡಿದೊಡನೆ ಮುಂದೆ ತಮಗಿಂತಲೂ ದೊಡ್ಡವರಾಗಬಹುದೇನೋ ಎಂಬ ತಪ್ಪು ಅಸೂಯೆಯಿಂದ ಪ್ರೋತ್ಸಾಹನೆಯ ಯಾವ ನುಡಿ ಆಡದ ಸಿಟ್ಟುಸೆಡವಿನ ವಿಶಿಷ್ಟಜಾತಿ

ನಿರ್ಮಾಣವಾದ ಈ ಯುಗದಲ್ಲಿ ಗೋಕಾಕರು ಇಂತಹದಕ್ಕೆ ತೀರ ಬಹಿಷ್ಕೃತರು. ಮೊದಮೊದಲು ಮಿತಭಾಷಿಗಳೆನಿಸುವಷ್ಟು ತೀರ ಗಂಭೀರ ಮುಖಮುದ್ರೆಯುಳ್ಳವರೆಂದು ಹೊಳೆಯುವಂತೆ ಮಾತಿಂಗೆ ಮಾತುಗುಡುವ ಪ್ರಸಂಗದಲ್ಲಿ ಅವರ ಶಬ್ದ ಕಿಡಿ. ಅಷ್ಟು ಉಗ್ರ. ಅಷ್ಟು ಶಾಂತಿಮಯ. ಆದರೂ ಸಾಮಾನ್ಯತಃ ದೈನಿಕ ವ್ಯವಹಾರದಲ್ಲಿಯ ಮಾತು ಮಲ್ಲಿಗೆಗಿಂತಲೂ ಮೃದು. ವಿದೇಶಯಾತ್ರೆ ಹಾಗೂ ವಿದ್ಯಾಸಂಪನ್ನತೆಯಿಂದ ಉದಾತ್ತ ಜೀವನದ ಸಂಸ್ಕಾರವೂ ಹಾಗೂ ನಾಲಗೆಯ ಹರಿತತನವೂ ಗೋಕಾಕರಿಗೆ ಮೈಗೂಡಿ ಹೋಗಿದೆ—ಎಂದು ಯಾರೂ ತಟ್ಟನೆ ಕಂಡುಕೊಳ್ಳಬಹುದು.

ಹೈದರಾಬಾದ ಕಾಲೇಜಿನಲ್ಲಿ ವಿನಾಯಕರಾಯರು ಮೊಟ್ಟಮೊದಲು ಪ್ರೊಫೆಸರರಿದ್ದಾಗಲೆ ಅವರ ಪರಿಚಯದ ಸಂಧಿ ನನಗೆ ದೊರೆತದ್ದು. ಅವರು ಸಹೃದಯತೆಯುಳ್ಳವರೆಂದು ಟಪಾಲಿನ ಮುಖಾಂತರವೇ ಅಂದು ಹೊಳೆಯಿತು. ಆ ಭಾವನೆ ಎಂದಿಗೂ ನೆಲೆಗೊಳ್ಳಬೇಕಾದದ್ದು. ಏನೂ ಪೂರ್ವ ಪರಿಚಯವಿಲ್ಲದ ನನ್ನಂತಹನೊಬ್ಬನ ಅತಿ ದೀರ್ಘ ಆಂಗ್ಲ ಲೇಖನ ಪ್ರೊಫೆಸರರೆಲ್ಲಿ ನೋಡುವರು. ಬಹಳವಾದರೆ ಪ್ರವಾಸದ ಗಲಭೆಯಲ್ಲಿ ಅದು ಕಳೆದುಹೋಗುವುದು ಖಂಡಿತ; ಅದು ಆಗದಿದ್ದರೆ ಒಂದುವೇಳೆ ಕಾಟಕ್ಕಾದರೂ ಕೆಲಸವಾಗಬಹುದು ಎಂದು ಏನೇನೋ ವಿಚಾರಗಳು ಮನಸ್ಸಿನಲ್ಲಿ ಮೂಡಿದ್ದವು. ಒಂದು ವಾರ ಕಳೆಯಿತು. ಎರಡು ವಾರ ಕಳೆದವು. ಮೂರು ನಾಲ್ಕು ವಾರ ಗತಿಸಿದ ಮೇಲೆ ಕೊನೆಗೊಮ್ಮೆ ನಾಟ್‌ಪೇಡ್ ಆಗಿ ಲಕ್ಕೋಟೆಯೊಂದು ತಲುಪಿತು. ಸಾಹಿತಿಗಳ ಮರಗೂಳಿತನದ ಮಾದರಿಯೆಂದು ಅಚ್ಚರಿ ಎನಿಸಲಿಲ್ಲ. ಆದರೆ ಆ ಅಭಿಪ್ರಾಯದ ಲಿಪಿ ? ಬ್ರಹ್ಮಲಿಪಿ. ಅಷ್ಟು ಮುದ್ದು ಅಕ್ಕರೆ! ಅಂತೂ ಪರಿಶ್ರಮದ ನಂತರ—ಮೊದಲು ಅರ್ಥವಾಗದ ಮಾತಿನ ಮುಂದೆ—ಹೃದಯದ ಪೂರ್ಣ ಸ್ಫೋಟವಾದಾಗ, ಗೋಕಾಕರ ವಿಷಯವಾಗಿ ಸಹಜ ಆದರಭಾವ ಹೆಚ್ಚಿತು. ಕ್ರಮೇಣ ನನ್ನ ಲೇಖನದ ಪುಟಗಳನ್ನು ಸೂಕ್ಷ್ಮ ರೀತಿಯಿಂದ ಅವಲೋಕಿಸುವಾಗಂತೂ ಮೊದಲು ಒಂದು ತಿಂಗಳ ಹಿಂದೆ ಪ್ರೊಫೆಸರರ ವಿಷಯಕ್ಕೆ ಕಲ್ಪಿಸಿಕೊಂಡಿದ್ದ ನಿರಾಶಾ ಮೋಡಗಳು ಚದುರಿದವು. ಮನೋಮಂದಿರದ ಆಕಾಶಗಂಗೆ ನಿರಭ್ರಳಾದಳು. ಎಷ್ಟು ಪರಿಶ್ರಮಪಟ್ಟು ಲೇಖನದ ಹೃದಯವನ್ನೇ ಒಳಹೊಕ್ಕು

ನೋಡಿರುವವರಲ್ಲಾ ಎಂದು ಸೋಜಿಗವೆನಿಸಿತು. ಗೋಕಾಕರ ರಸಿಕತೆ ಸಹೃದಯತೆಗಳ ಅರಿವೂ ಆಗತೊಡಗಿತು. 'ಬೆಲೆಗೊಟ್ಟು ತಾರ ಮಘುವಂ ಮಲಯಾನಿಲನಂ ಮನೋಜನಂ ಕೌಮುದಿಯಿಂ' ಎಂದು ಹಿರಿಕವಿಗಳು ಬಣ್ಣಿಸುವಂತೆ ರಸಸ್ವಾದನೆಯ ಗುಣವು ತೀರ ಅಪರೂಪ; ಇಂತಹ ಗುಣವು ಗೋಕಾಕರಂತಹರದಷ್ಟೇ ಸೊತ್ತು ಎಂದು ನನಗೆ ಮನವರಿಕೆಯಾಗದೆ ಹೋಗಲಿಲ್ಲ.

ಪ್ರೊಫೆಸರ ಗೋಕಾಕರು ನಿಷ್ಪಕ್ಷಪಾತ ಬುದ್ಧಿಯುವರೆಂದು ಅವರ ವಿಮರ್ಶೆಯ ರೀತಿಯಲ್ಲಿ ನಾನು ಮೊದಲುಕಂಡುಕೊಂಡದ್ದು.'Judge by the results and never by the standards' ಎಂಬ ತತ್ವವನ್ನು ಕ್ರಮಬದ್ಧವಾಗಿ ಅನುಸರಿಸಿ ಬರೆಹಗಾರರ ಬೆಲೆ ಕಟ್ಟುವವರು ವಿರಳ. ಲೇಖಕನೆಂದರೆ ಅವನೊಬ್ಬ ವಧ್ಯಸ್ಥಾನದಲ್ಲಿಯ ಪ್ರಾಣಿಯೆಂಬ ಭಾವನೆಯಿಂದ ಅಲ್ಲದ ಸಲ್ಲದ ಆದರ್ಶಗಳ ಬೆನ್ನುಹತ್ತಿ ಕಲೆಯ ಕೊಲೆಮಾಡುವವರೇ ಹೆಚ್ಚು. ಇಂತಹ ಹುಚ್ಚು ನೂದರಿಗಳ ಬಲಿಗೆ ಬಿದ್ದು ಆಂಗ್ಲಸಾಹಿತ್ಯದಲ್ಲಿ ಡಾಕ್ಟರ ಜಾನ್ಸನ್‌ರಂತಹ ವಿದ್ವಾವಂತ ವಿಮರ್ಶಕರು ಮಿಲ್ಟನ್‌ರಂತಹ ಪ್ರತಿಭಾಶಾಲಿಗಳಿಗೆ ಅನ್ಯಾಯ ಮಾಡಿದ್ದುಂಟು. ತೀರ ತದ್ವಿರುದ್ಧವಾಗಿ ಮೆಕಾಲೆಯಂತಹ ಇತಿಹಾಸಪ್ರೇಮಿಗಳು ಮಿಲ್ಟನ್ ನುಡಿದದ್ದೆಲ್ಲವೂ ಮೃದು ಮಧುರ ಪದಸರಣಿ ಎಂದು ಅವನ ಕಲಾಕೃತಿಯನ್ನುಎದೆಗವಚಿಕೊಂಡಿದ್ದೂ ಉಂಟು. ಆದರೆ ಮುಖ್ಯತಃ ದೋಷೈಕದೃಷ್ಟಿಯಿಟ್ಟುಕೊಳ್ಳದೆ ನಿಷ್ಪಕ್ಷಪಾತ ಪರಿಶೀಲನೆ ವಿಮರ್ಶಕನಗುರಿ ಎಂದು ನೆರೆನಂಬಿ ಶ್ರೀರಂಗರ 'ವಿಶ್ವಾಮಿತ್ರನ ಸೃಷ್ಟಿ' ಎಂಬ ಸಾಮಾಜಿಕ ಕಾದಂಬರಿಯನ್ನು ಪ್ರೇಮ ತ್ರೈಮಾಸಿಕದಲ್ಲಿ ಗೋಕಾಕರು ವಿಮರ್ಶಿಸಿದುದನ್ನು ನಾನು ಓದಿದಾಗಿನಿಂದಲೂ ಶ್ರೀಯುತರ ರಸಾಸ್ವಾದನೆಯ ಸರಣಿಗೆ ಮೆಚ್ಚಿರುವೆ. ಹೊರ ಹೊದಿಕೆ, ಪುಟ ಸಂಖ್ಯೆ, ಅಚ್ಚುಕಟ್ಟು ಹಾಗೂ ಲೇಖಕರ ಬಗ್ಗೆ ಬಳಸಬೇಕಾದ ಕೆಲ ವಿಶೇಷಣಗಳ ಪರಂಪರೆಯ ಮಾಲೆಯನ್ನನುಸರಿಸುವವುದು ವಿನಾಯಕರಾಯರ ದೃಷ್ಟಿಯಿಂದ ಅಕ್ಷಮ್ಯ ಅಪರಾಧ. ಇಡೀ ಕಥಾನಕದ ಮುಖ್ಯಾಂಶ ಹೇಳುವಷ್ಟು ತಾಳ್ಮೆವಹಿಸಿ, ಲೇಖಕರ ಸಮಸ್ಯೆ ಓದುಗರ ಮುಂದಿರಿಸಿ,ಅಲ್ಲಿಯ ತಿಳಿ ಹಾಸ್ಯದ ಸ್ವರೂಪವನ್ನು ಬೇರೆ ಬೇರೆ ಭಾಷೆಗಳ ತಜ್ಞರ ರೀತಿಯೊಡನೆ

ತೂಗಿ ನೋಡಿ, ವರ್ಣನೆ, ಸನ್ನಿವೇಶ, ಪಾತ್ರಪರಿಪೋಷಣೆಯ ಕಲಾತ್ಮಕತೆಯ ಬಗ್ಗೆ ಚರ್ಚಿಸಿ, ಶೈಲಿಯ ಹೃದಯ ಒಳಹೊಕ್ಕು ನೋಡಿದುದು ಪ್ರೊಫೆಸರರ ಆ 'ವಿಮರ್ಶೆಯ ಮೇಲ್ಮೆ. ಆಂಗ್ಲ ಸಾಹಿತ್ಯದ ಆಳ ಅಭ್ಯಾಸವು ಅದಕ್ಕೆ ಮೆರುಗನ್ನಿತ್ತಿರಬಹುದು. ಆದರೆ ಶ್ರೀರಂಗರದು ಯಾವ ವಿಚಾರದ ಪಂಥ, ಯಾವ ಸಾಹಿತ್ಯಿಕರ ಗುಂಪಿಗೆ ಒಳಪಟ್ಟವರೆಂದು ರೂಹಿಸುವದು ಅವರ ವಿಮರ್ಶೆಯ ಕ್ಷೇತ್ರವಾಗಿಲ್ಲ. ಯಾವ ರಹಸ್ಯ, ಆದರ್ಶಗಳನ್ನು ಕಾದಂಬರಿಕಾರರು ಪಾತ್ರಸೃಷ್ಟಿಯಲ್ಲಿ ಕಲ್ಪಿಸಿ ಎಷ್ಟರ ಮಟ್ಟಿಗೆ ಬಿಂಬಿಸಲು ಯಶಸ್ವಿಗಳಾಗಿದ್ದಾರೆ ಎಂಬುದು ಮುಖ್ಯ. ಕಥಾನಾಯಕನ ಹೋರಾಟ ಹೆಚ್ಚಿ ಯಾವ ಗುರಿ ಸಾಧಿಸಲು ಹೆಣಗಿದ್ದಾನೆ ಎಂಬುದನ್ನು ವಿಮರ್ಶಕರು ವಿವೇಚಿಸುವರು. ನೈಜವಿಮರ್ಶೆ ಕಲೆಯ ವಿಲಾಸ ತೋರಬೇಕು ಎಂಬ ಮಾತಿನಲ್ಲಿ ಸತ್ಯಾಂಶವಿದ್ದರೆ, ವಿನಾಯಕರಾಯರ ವಿಮರ್ಶೆ ಒಂದು ಉತ್ತಮ ಗದ್ಯ ವಿಭಾಗ. ಮೂಲ ಕಲಾಕೃತಿಯ ಕಿಂಚಿತ್ ಪರಿಚಯವಿಲ್ಲದವರು ಕೂಡ ಈ ವಿಮರ್ಶೆ—ತರ್ಕದ ತಂತಿಯ ಮೇಲೆ ಝೋಲಿ ಹಿಡಿದು ಹೊರಟ ಹರಟೆಯನ್ನುವಷ್ಟು—ರುಚಿಕಟ್ಟಾಗಿದೆ ಎಂದು ಮನಗಾಣುವರು. ಕೊನೆಯವರೆಗೂ ಓದುವ ವಿಚಾರ ತಳೆಯುವದುಂಟು. ಅಲ್ಲದೇ ವಿಮರ್ಶಕನ ಸಹೃದಯತೆ ಸಂಸ್ಕಾರ, ಲಾಕ್ಷಣಿಕ ವಿಚಾರಗಳಿಗೆ ಎಂತಹರೂ ತಲೆದೂಗುವದೂ ಅಸಹಜವಲ್ಲ.

ಪರದೇಶಕ್ಕೆ ಹೋಗಿ ತಮ್ಮ ಕೀರ್ತಿಯ ಪತಾಕೆ ಮೆರಿಸಿದೊಡನೆ ಉನ್ಮಾದದಿಂದ ಇಲ್ಲದ ಕೃತಕತೆಗೆ ಆಡಂಬರಕ್ಕೆ ಮನಸೋಲುವವರು ಎಷ್ಟೋ ಜನರು. ಆಂಗ್ಲರ ನಡೆನುಡಿ,ಅಲೌಕಿಕ ದೇಶಪ್ರೇಮ, ಸುಧಾರಣೆಯಪ್ರಪಂಚ ಹೊಗಳುತ್ತ ಕುರುಡರಂತೆ ಕೂಡ್ರುವದು ಮೌರ್ಖ್ಯಸ್ಖಲಿತವೆಂದು ಗೋಕಾಕರು ತಿಳಿದವರು. ಅಂತೇ ಪರದೇಶದಲ್ಲಿ ಯಾವ ಚಟುವಟಿಕೆಗಳಲ್ಲಿ ಭಾಗವಹಿಸಿದರೂ ತಾವು ಕರ್ನಾಟಕದ ಪ್ರತಿನಿಧಿ, ಒಬ್ಬ ಸ್ವಾಭಿಮಾನಿ ವ್ಯಕ್ತಿ, ಮಹತ್ವಾಕಾಂಕ್ಷಿ ಎಂಬುದನ್ನು ಮರೆಯಲಿಲ್ಲ. ಆಂಗ್ಲರ ಯಾವ ಅನುಕರಣೆ ಮಾಡುವದು ಸ್ತುತ್ಯ, ಯಾವದು ಅನವಶ್ಯಕ ಎಂದು ವಿಚಾರಿಸಿ ಯಾವ ಸೋಗಿಗೂ ಮೊರೆ ಹೋಗಲಿಲ್ಲವೆಂದು ಗೋಕಾಕರ ತೀರ ಪರಿಚಿತರಿಗೆ ತಿಳಿಹೇಳುವದು ಕಾರಣವಿಲ್ಲ. ಎಲ್ಲಕ್ಕೂ ಹೆಚ್ಚೆಂದರೆ, ಕನ್ನಡದ ಏಳ್ಗೆಗಾಗಿ

ಮನಮುಟ್ಟಿ ದುಡಿಯುವದೇ ಕನ್ನಡಿಗನ ಧರ್ಮ ಎಂಬ ಮಾತನ್ನು ಅವರು ಅಕ್ಷರಶಃ ಪಾಲಿಸಿದವರು, ಪಾಲಿಸುವವರು. ಕನ್ನಡದ ಜನಾಂಗದ ಅಭಿಮಾನಕ್ಕೆ ಚ್ಯುತಿಬರುವಂತೆ ಕಂಡರೆ, ಕನ್ನಡದ ಅವಮಾನವಾಗುವಂತಿದ್ದರೆ ಮಹಾರಾಷ್ಟ್ರದಲ್ಲಿ ಎಷ್ಟೋ ಸಲ ಎದೆಗೊಟ್ಟು ನಿಂತು ಹೋರಾಡಿ ಕನ್ನಡದ ಮೇಲ್ಮೆ ಅವರು ಮನಗಾಣಿಸಿ ಕೊಟ್ಟುದುಂಟು. ಆಗ ಶ್ರೀಯುತರ ವ್ಯಕ್ತಿಯು ಹಿತ ಪಾದಧೂಳಿಗೆ ಸಮವೆಂದು ತಿಳಿದುದರಲ್ಲಿ ಅಚ್ಚರಿ ಏನು ?

ಕನ್ನಡದ ಸಂಮೋಹಕ ಶಕ್ತಿಗೆ ವಶರಾದ ಗೋಕಾಕರು ಏಕೀಕರಣ, ವಿಜ್ಞಾನ, ರಾಜಕಾರಣ, ಪ್ರಗತಿಶೀಲತೆಗಳ ಸೋಂಕು ತಾಗಬಾರದೆಂಬ ಮಡಿವಂತರು ಸರ್ವಥಾ ಅಲ್ಲ. ಈ ಮಾತಿನ ಯುಕ್ತಾಯುಕ್ತತೆಯನ್ನು ಅವರ ಸಾರ್ವಜನಿಕ ಉಪನ್ಯಾಸಗಳಲ್ಲಿಯೂ, ಸಾಹಿತ್ಯಸೇವೆಯಲ್ಲಿಯೂ ನಿತ್ಯದ ತಲೆಹರಟೆಯಲ್ಲಿಯೂ ಕಾಣಬಹುದು.

ಹೀಗೆ ಸದ್ಗುಣಗಳಆಗರವಾಗಿದ್ದರೂ ಗೋಕಾಕರು ಪ್ರತಿಭಾಸಂಪನ್ನರು. ಆಂಗ್ಲ ಸಂಸ್ಕಾರಗಳಹೃದಯ, ಅಲ್ಲಿಯ ನವೀನ ಪ್ರಪಂಚದ ವಿಲಾಸ ವೈಗೂಡಿಸಿಕೊಂಡಿರುವರೆಂಬುದನ್ನು ಅವರ ವ್ಯಕ್ತಿತ್ವದ ಅರಿವಿದ್ದವರಿಗೆ ಬೇರೆ ಹೇಳಬೇಕಾದುದಿಲ್ಲ. ಅಂದವಾಗಿ ಬಾಚಿರದಿದ್ದರೂ ಅಚ್ಚುಕಟ್ಟಾದ ತಲೆಗೂದಲು, ವಿದ್ಯೆಯಕಾಂತಿ ಹೊರಸೂಸುವ ಸ್ಪಷ್ಟವಾದ ಕಣ್ಣು, ಅದರ ವಿಶಾಲತೆಯ ದ್ಯೋತಕವಾದ ಇನ್ನೂ ವಿಶಾಲ ಹಣೆ, ನಸುದೊಡ್ಡ ಮೂಗು, ನಸುಗೆಂಪು ವರ್ಣ, ಜೀವನಮಾನವೆಲ್ಲ ವಿದ್ಯಾರ್ಥಿದೆಸೆಗೇ ಮೀಸಲೆಂಬ ಧ್ಯೇಯದಪ್ರತೀಕವೆನ್ನುವಂತಹ ಕನ್ನಡಕಗಳು, Laugh laugh the world laughs with you; weep weep and you weep but alone'— ಎಂಬ ಜೀವನದ ತಾತ್ವಿಕ ತಿರುಳು ತಿಳಿಹೇಳುವ ಮೂಡಿ ಮಿಂಚಿ ಮಾಯುವಾಗುವ ನಗೆ ಮುಗುಳು, ಆಂಗ್ಲಉಡಿಗೆ, ಕ್ರೀಡಾಪಟುಗಳಂತಹ ಎತ್ತರದ ನಿಲುವು, ಗಂಭೀರವಾದರೂ ದರ್ಪದ ಸೋಂಕಿಲ್ಲದ ಸ್ಥೈರ್ಯದ ನಡಿಗೆ, ಸೌಜನ್ಯಮೂರ್ತಿ ಎನಿಸುವಂತಹ ಜೋಡಿಸಿದ ಕೈಗಳ ಪ್ರದೀರ್ಘ ನಮಸ್ಕಾರ—ಒಂದೇ ಎರಡೇ? ಇಂತಹ ಇನ್ನೆಷ್ಟೊ ಲಕ್ಷಣಗಳು ಗೋಕಾಕರ ಬಗ್ಗೆ ಗೌರವತಳೆಯಲು ಸಹಾಯಕಾರಿಯಾಗಿವೆ ಎನ್ನಲು ಎಷ್ಟು ವಿಸಂಗತವಿಲ್ಲ.

——————

### ರಂ. ಶ್ರೀ. ಮುಗಳಿ

೧೯೪೦ನೇಯ ಇಸ್ವಿ. ನಾನು ಆದೇ ಲೇಖನಗಳನ್ನು ಬರೆದು ಸ್ವಂತ ವೆಚ್ಚದಿಂದ ಪತ್ರವ್ಯವಹಾರ ಮಾಡಿ ಅಸ್ವೀಕೃತ ಲೇಖನಗಳನ್ನು ಮರಳಿ ಪಡೆಯುವ ಹವ್ಯಾಸದಲ್ಲಿದ್ದೆ. ಅನುವಾದಿತ ಕಥಾಸಂಕಲನವನ್ನು ಹೊಸ ಪ್ರಕಾಶಕರೊಬ್ಬರಿಗೆ ಒಪ್ಪಿಸಿ ಸಾಹಿತ್ಯಾಂಬುಧಿಯಲ್ಲಿ ಮೊದಲ ದೀಪ ತೇಲ ಬಿಟ್ಟಕಾಲ. ಅಂತೂ ಸ್ವತಂತ್ರ ಲೇಖನವೊಂದು ಪ್ರಕಟವಾದರೆ ಸಾಕೆಂದು ಅಲ್ಲಲ್ಲಿ ಸಂಪಾದಕರಿಗೆ ಕಾಡಿ ಪ್ರಕಟನೆಗೆ ಹಾತೊರೆಯುವದು ನಿರಂತರ ಸಾಗಿತ್ತು. ಇಂತಹ ವಿಜಯ (?) ಯಾತ್ರೆಯ ರಸನಿಮಿಷದಲ್ಲಿ— 'ಜೀವನ ಪತ್ರಿಕೆಯ ಸಂಪಾದಕರು ಹೊಂಗ್ಲಿಯಲ್ಲಿರುತ್ತಾರೆಂದೂ ಬೇಕಾದರೆ ಲೇಖನಗಳನ್ನು ಅವರ ವಿಳಾಸಕ್ಕೆ ಕಳುಹಿಸಬಹುದೆಂಬ' ಪ್ರಕಟನೆ ಓದಿದಾಗ ನನಗಾದ ಆನಂದ ಅಷ್ಟಿಷ್ಟಲ್ಲ. ಏನೇ ಆಗಲಿ, ಪ್ರಕಟನೆಯು ಹೊಸದೊಂದು ಮಾರ್ಗ ದೋರಿಯುತೆಂದು 'ಮೂಗಿನ ಸಮಸ್ಯೆ' ಎಂಬ ನಗೆಬರಹವನ್ನು ಕಳಿಸಿದೆ. ಎರಡು ವಾರಗಳಾದ ಮೇಲೆ—'ಈ ಬರೆಹದಲ್ಲಿ ಕೊಂಚ ವಿನೋದವಿದೆ; ಆದರೆ ವಿಚಾರಗಳು ಅಷ್ಟೊಂದು ಹೊಂದಿಕೆಯಾಗಿ ಬಂದಿಲ್ಲ—' ಎಂಬರ್ಥದ ಪ್ರೊ. ರಂ. ಶ್ರೀ. ಮುಗಳಿಯವರ ವಿಳಾಸದ ಬರೆಹ ತಲುಪಿತು. ನಿರಾಶೆ ಎಷ್ಟೋ ಬಯಲಾಯಿತು. ಮತ್ತೊಂದು ಲೇಖನ ಸಿದ್ಧಗೊಳಿಸಿ ಪತ್ರವ್ಯವಹಾರ ನಡೆಯಿಸುವ ದೃಢಸಂಕಲ್ಪಕ್ಕೆ ಕೈಹಾಕಿದೆ. ಈ ಸಲದ ಪ್ರಬಂಧ 'ಕ್ಲಿಷ್ಟತೆ' ಯ ಬಗ್ಗೆ ಇದ್ದುದರಿಂದ ಕಳಿಸಿದ ಮೂರು ತಿಂಗಳುಗಳಲ್ಲಿಯೆ ಜೀವನದ 'ಅರವಿಂದರ ವಿಶೇಷ ಸಂಚಿಕೆ' ಯಲ್ಲಿ ಪ್ರಕಟವಾಯಿತು. ಇದೇ ನಿಮಿತ್ತದಿಂದ ಪ್ರೊ. ಮುಗಳಿಯವರಿಗೆ—'ಕನ್ನಡ ಪ್ರಬಂಧಕಾರರು' ಎಂಬ ಲೇಖನಮಾಲೆಯ ಬಗ್ಗೆ ಸಲಹೆ ಸೂಚನೆ ಕೇಳಲು ಅನುವು ಕಲ್ಪಿಸಿ ಕೊಟ್ಟಂತಾಯಿತು. ಇಂತು ಲೇಖನಕಲೆಯ ಗುಣಾವಗುಣ ಚರ್ಚಿಸುವ ಪ್ರಸಕ್ತಿಯಿಂದಲೇ ಮುಗಳಿಯವರಿಗೂ ನನಗೂ ಪರಿಚಯವಾದದ್ದು. ಇತ್ತೀಚಿನ ನಾಲ್ಕಾರು ವರ್ಷಗಳಿಂದಂತೂ ಅವರೊಡನೆ ಮಾತಾಡುವದು ಅಭ್ಯಾಸವಾಗಿ ಹೋಗಿದೆ— ಆದರೆ ಮೊದಲಿನಂತೆ ಕೇವಲ ಲೇಖನ ಪ್ರಕಾಶನಕ್ಕಾಗಿ

ಅಲ್ಲ. ಪ್ರೊಫೆಸರರ ಇತ್ತೀಚಿನ ಸಾಮಾಜಿಕನಾಟಕ, ಸಂಶೋಧನೆ, ಸ್ವ-ದರ್ಶನ, ಖಂಡಕಾವ್ಯ—ಓದುವಾಗಂತೂ ಅವರ ಸಾಹಿತ್ಯ-ಜೀವನದ ನಿಕಟ ಪರಿಚಯಮಾಡಿಕೊಳ್ಳಬೇಕೆಂಬ ವಿಚಾರ ತಲೆದೋರುತ್ತಿತ್ತು. ಇಂತಹ ಕಲ್ಪನೆಯ ಊರ್ಮಿಗಳು ಅಸಂಖ್ಯವಾಗಿ ಉದ್ಭವಿಸಿದಾಗಲೇ ನಾನು ರಂಗನಾಥರ ವ್ಯಕ್ತಿತ್ವವನ್ನು ಸೂಕ್ಷ್ಮವಾಗಿ ಅಭ್ಯಸಿಸಲು ಪ್ರಾರಂಭಿಸಿದ್ದು.

೧೯೨೪ರಲ್ಲಿ ಕಾಲೇಜ ವಿದ್ಯಾಭ್ಯಾಸಕ್ಕೆಂದು ಧಾರವಾಡಕ್ಕೆ ಬಂದಾಗಿನಿಂದ ರಂಗನಾಥರಿಗೆ ಸಾಹಿತ್ಯ ನಿರ್ಮಿತಿಯ ಕಡೆಗೆ ಮನಸ್ಸೊಲಿಯಿತು. ಅದಕ್ಕೆ ಮೂಲತಃ ಗಳಗನಾಥರ ಕಾದಂಬರಿಗಳು, ಕಾಲಿದಾಸನ ಕಲಾಕೃತಿಗಳು ಕಾರಣವೆಂದು ರಾಯರ ಅಭಿಪ್ರಾಯ. ಆಗೀಗ ಜಯಕರ್ನಾಟಕ, ಪ್ರಬುದ್ಧಕರ್ಣಾಟಕದಲ್ಲಿಯ ಕವನ ಲೇಖನಗಳನ್ನು ಓದಿ ಮೆಚ್ಚಿದ್ದರೂ ಬೇಂದ್ರೆ-ಗೋಕಾಕರ ಪರಿಚಯವಾಗಿರದಿದ್ದರೆ ಅವರ ಕಾವ್ಯೋಪಾಸನೆಗೆ ಅಷ್ಟು ಕಳೆ ಏರುತ್ತಿರಲಿಲ್ಲ. ಮಲೆನಾಡಿನ ಸೆರಗಾದ ಧಾರವಾಡದ ಮಳೆಗಾಲದ ಐಸಿರಿ ಕಣ್ಮುಟ್ಟಿ ಕಂಡು ತನ್ಮಯರಾದಾಗ ಮುಗಳಿಯವರಿಗೆ ತಮ್ಮಲ್ಲಿ ಸ್ಫುರಿಸಿದ ಭಾವನೆಗಳನ್ನು ಕಾವ್ಯದ ಹೊನಲಿನಲ್ಲಿ ರೂಹಿಸಬೇಕೆಂಬ ಎನಿಸಿರಬೇಕು. ನಿರಂತರ ನಾಗಿಬರುವ ಅಲೆ ಅಲೆಯಾದ ಮೋಡಗಳು, ಪಚ್ಚಪಸಿರು ಮುರಿಯುವ ವೃಕ್ಷರಾಜಿ, ಹೆಸರಿಲ್ಲದ—ನಮಗೆ ಗೊತ್ತಾಗದ—ಕಾಡು ಹೂಗಳ ಐಸಿರಿ, ಕಾಮನಬಿಲ್ಲಿನ ಸಪ್ತರಂಗಗಳು, ಸೂರ್ಯೋದಯ ಸೂರ್ಯಾಸ್ತ-ಗುಡ್ಡ-ಕೊಳ್ಳಗಳ ನೋಟಗಳು ಈ ವ್ಯಕ್ತಿಯನ್ನು ಕಾವ್ಯಲೋಕಕ್ಕೆ ಕರೆದೊಯ್ದುದು ದೊಡ್ಡ ಮಾತಲ್ಲ. ಸಾಮಾನ್ಯ ಮನುಷ್ಯನಿಗೇ ಇಂತಹ ವನಶ್ರೀಯಲ್ಲಿ ಅನುಪಮ ಆನಂದದ ಅರಿವಾದರೆ, ಸುಸಂಸ್ಕೃತ ಜೀವಿಯು ಭಾವನಾಲೋಕದಲ್ಲಿ ವಿಹರಿಸುವಂತಾದರೆ ಏನು ಅಚ್ಚರಿ? ಅಂತೂ ಗದ್ಯವಲ್ಲದ ಪದ್ಯದೊಡನೆ ಮೊಟ್ಟಮೊದಲು ರಸಿಕರಂಗರು ಕಾವ್ಯೋದ್ಯಾನದಲ್ಲಿ ಅಡಿಯಿಟ್ಟು ಕೃಷಿ ಮಾಡಲು ಪ್ರಾರಂಭಿಸಿದರಂತೆ. ಕರ್ನಾಟಕ ಸಂಘದ ಹಾಗೂ ಕಾಲೇಜ ಪತ್ರಿಕೆಯ ಕನ್ನಡ ವಿಭಾಗದ ಚಟುವಟಿಕೆಗಳಲ್ಲಿ ಭಾಗವಹಿಸಿ ಹೆಚ್ಚಾಗಿ ಬರೆಯುವ ರೂಢಿ ಇಟ್ಟುಕೊಂಡಾಗ ಕೆಲ ಕವನಗಳು ನೈಜಸ್ಫೂರ್ತಿಯ ರಾಗರಂಜಿತವಾಗಿ ಅವರಿಂದ ಹೊರಹೊಮ್ಮಿದುವು. ಆಗಿನ ಕೆಲ ಸರಸ ಕವನಗಳೇ ಇಂದು 'ಬಾಸಿಗ' ಎಂಬ ಅವರ ಲೋಕಪ್ರಿಯ ಕವನಸಂಗ್ರಹದಲ್ಲಿ ಸೇರಿವೆ.

ಕನ್ನಡ ಮುಖ್ಯ ವಿಷಯವಾಗಿಟ್ಟುಕೊಂಡು ಎಂ. ಎ. ಪರೀಕ್ಷೆಯಲ್ಲಿ ಉತ್ತಮ ರೀತಿಯಿಂದ ತೇರ್ಗಡೆಹೊಂದಿ ಸಾಂಗ್ಲಿ ವಿಲಿಂಗ್ಡನ್ ಕಾಲೇಜಿನಲ್ಲಿ ಪ್ರೊಫೆಸರರಾದನಂತರ ರಸಿಕರಂಗರಿಗೆ ಕನ್ನಡ ಚಟುವಟಿಕೆಗಳಲ್ಲಿ ಅತೀವ ಅಭಿರುಚಿ ಹುಟ್ಟಿತು. ತನುಷ್ಟಕ್ಕೆ ತಾವು ಬರೆಯುವ ಜನರಂತಾಗದೆ ತಮ್ಮ ವಿದ್ಯಾರ್ಥಿವೃಂದದಲ್ಲಿಯೂ ಸಾಹಿತ್ಯೋಪಾಸನೆ ಅವ್ಯಾಹತವಾಗಿ ಸಾಗಿ ಬರಲೆಂದು ಅವರ ಉತ್ಕಟೇಚ್ಛೆ. ವರ್ಗದಲ್ಲಿ ಕಲಿಸುವಾಗ ಒಂದುವೇಳೆ ವಿದ್ಯಾರ್ಥಿಗಳಿಗೆ ಪ್ರಶ್ನೆಕೇಳಲು ಸಂಕೋಚವೃತ್ತಿ ತಲೆದೋರಬಹುದೆಂದು ' ವರುಣಕುಂಜ ' ಎಂಬ ಅಭ್ಯಾಸ ಮಂಡಲವೇರ್ಪಡಿಸಿರುವರು. ಇದೀಗ ಚಿಗುರುವ ಸಾಹಿತ್ಯ ಬಳ್ಳಿಗೆ ನೀರೆರೆಯುವ ಇಂತಹ ಸಂಘಗಳು ಎಷ್ಟಾದರೂ ಅತ್ಯವಶ್ಯ ಅಹುದು. ಇಂತಹ ಸಂಘಗಳ ನೇತೃತ್ವದಲ್ಲಿಯೇ ಎಷ್ಟೊ ಮಹತ್ವಾಕಾಂಕ್ಷಿ ವಿದ್ಯಾರ್ಥಿಗಳು ಕಾವ್ಯ, ಪ್ರಬಂಧ, ವಿಮರ್ಶೆ ಮೊದಲಾದ ಕಲೆಗಳ ಉಪಾಸನೆ ಮಾಡಿಕೊಂಡದ್ದುಂಟು. ಎಲ್ಲಕ್ಕೂ ಹೆಚ್ಚಾಗಿ ರಂಗನಾಥರು ವಿದ್ಯಾರ್ಥಿಗಳ ಲೇಖನಗಳ ಗುಣದೋಷಗಳನ್ನು ಅವರೊಡನೆಯೇ ಚರ್ಚಿಸುತ್ತಿರುವದರಿಂದ ವರುಣಕುಂಜವು ಶಿಕ್ಷಣ ರಂಗವೆನಿಸಿದೆ. ಸ್ವತಃ ಮುಗಳಿಯವರು ಸರಾಗವಾಗಿ ಕವನ ಅನ್ನುವ ಕಲೆ ಸಾಧಿಸಿಕೊಂಡು ಅಭ್ಯಾಸ ಮಂಡಲದ ಸದಸ್ಯರಿಗೆ ಆಗಾಗ ಕಾವ್ಯದ ರಸದೂಟ ಬಡಿಸುವದೂ ಉಂಟು. ಪ್ರಾಧ್ಯಾಪಕ ಮಟ್ಟದಿಂದಿಳಿದು ಆತ್ಮೀಯತೆಯಿಂದ ವಿದ್ಯಾರ್ಥಿಗಳೊಡನೆ ತಾಸೆರಡು ತಾಸು ವಿವಿಧ ಸಮಸ್ಯೆಗಳ ಬಗ್ಗೆ ಚರ್ಚಿಸುವರು. ನಿಜವಾದ ಶಿಕ್ಷಣದ ಗುಟ್ಟು ಇದು ಎಂದು ತಿಳಿದ ಜನರೇ ವಿರಳ.

'ಸಾಹಿತ್ಯವು ಜನಜೀವನದ ಪಡಿನೆಳಲು' ಎಂದು ಬಲ್ಲವರು ಹೇಳುವರು. ಈ ಉಕ್ತಿಯಂತೆ ಸಾಹಿತಿಯು ತನ್ನ ಸುತ್ತುಮುತ್ತಲಿನ ಬಾಳಿನ ಸುಖದುಃಖಗಳನ್ನು ನಾಟಕ, ಕಾದಂಬರಿ, ಸಣ್ಣಕತೆ, ಪ್ರಬಂಧಗಳ ಮೂಲಕ ಆಗಾಗ ಹೊರಹೊಮ್ಮಿಸಲು ಯತ್ನಿಸುವನು. ಆ ದೃಷ್ಟಿಯಿಂದ ವಿಚಾರಿಸಲಾಗಿ ಮುಗಳಿಯವರ ಕಾದಂಬರಿಗಳಾದ ಬಾಳುರಿ, ಕಾರಣಪುರುಷ, ಅನ್ನ— ಆ ಆ ಕಾಲದ ಸಾಮಾಜಿಕ ಸಮಸ್ಯೆಗಳನ್ನು ಕಲಾಪೂರ್ಣವಾಗಿ ವಾಸ್ತವತೆಯ ಹಿನ್ನೆಲೆಯಲ್ಲಿ ಚಿತ್ರಿಸಿವೆ. ಶ್ರೀಯುತರ ಏಕಾಂಕಗಳಂತೂ ಅತ್ಯಂತ ಪರಿಣಾಮಕಾರಿಯಾಗಿ ಈ ಉದ್ದೇಶ ಸಾಧನೆಗಾಗಿ ಮೀಸಲಾಗಿವೆ. ನಮ್ಮ

ಸಮಾಜದಲ್ಲಿಯ ಗಂಡುಹೆಣ್ಣಿನ ತೊಡಕಿನ ಬಗೆಗೆ ವಿಚಾರಿಸಬೇಕೆಂದರೆ 'ಕೂಡಲಾರದ ಕಣ್ಣು' ಎಂಬ ಏಕಾಂಕದ ಅವರ ಒಂದೇ ಮಾದರಿ ಸಾಕು. ಇಂದು ಗಂಡಸು ಹೇಗೆ ತಾಯಿ ಹಾಗೂ ಹೆಂಡತಿಯ ಕೈಯಲ್ಲಿ ಸಿಕ್ಕು ಜರ್ಜರಿತನಾಗಿ, ಸಂಸಾರದಲ್ಲಿ ವಿರಸಕ್ಕೆ ತುತ್ತಾಗಿ ಕೊನೆಗೆ ಇಬ್ಬರನ್ನೂ ಮೋಸಗೊಳಿಸಿ ಹೇಗೆ ಮನೆಮಾರು ಬಿಟ್ಟು ಹೊರಡುವನೆಂಬದರ ಪ್ರಾಮಾಣಿಕ ಚಿತ್ರ ಅಲ್ಲಿದೆ. ಇಂದಿನ ಪರಿಸ್ಥಿತಿಯಲ್ಲಿ ಗಂಡಹೆಂಡರು ಒಬ್ಬೊಬ್ಬರನ್ನು ನಡಿಸಿಕೊಳ್ಳದೆ ಸುಖಮಯವಾಗಿ ಸಂಸಾರ ಸಾಗಿಸುವ ಮಾರ್ಗ ಕಾಣಲಿ ಎಂಬ ಸಂದೇಶ ಅಡಕವಾಗಿದೆ. ರಂಗಭೂಮಿಯ ಮೇಲಿನ ಪರಿಣಾಮ ಹಾಗೂ ಕಾಲಮಾನದ ಕಲ್ಪನೆಯ ಪ್ರಕಾರ, ಈ ಏಕಾಂಕವು ಅರ್ಧ ತಾಸಿನಲ್ಲಿ ಮುಗಿದು ಸಮಸ್ಯೆಯ ಉತ್ಕಟತೆಯನ್ನು ಓದುಗರ ಮನಸ್ಸಿನ ಮೇಲೆ ಬಿಂಬಿಸುವದು. ಅಲ್ಲದೆ ಪ್ರಚಲಿತವಾದ ನಮ್ಮ ಆಚಾರವಿಚಾರ, ವೇಷಭೂಷ, ನಡೆನುಡಿಗಳ ಮೇಲೆ ವಕ್ರೋಕ್ತಿವಿಲಾಸದ ವಿನೋದ ಆಗಾಗ ತೂರಿ ಬರುವದು. ಮುಖ್ಯವಾಗಿ ನಾಟಕ ಮುಗಿದ ಮೇಲೆ ತಲೆದೂಗಿಸುವಂತಾಗದೇ ಇಲ್ಲಿಯೂ ಒಂದು ಬಿಕ್ಕಟ್ಟಿನ ಪ್ರಶ್ನೆ ಇದೆ ಎಂದು ಮನವರಿಕೆಯಾದರೆ ಸಾಹಿತ್ಯದ ಯಥಾರ್ಥತೆ ಸಾಧಿಸದೆ ?

ರಂಗನಾಥರು ತಮ್ಮ ಮಟ್ಟಿಗಾದರೂ ಒಳ್ಳೇ ಅಭ್ಯಾಸಿಗಳು ಸತತೋದ್ಯೋಗಿಗಳು ಎಂಬದು 'Cultural Heritage of Karnatak' ಎಂಬ ಅವರ ಸಂಶೋಧನಾತ್ಮಕ ಗ್ರಂಥವನ್ನು ಕೂಲಂಕಷವಾಗಿ ಓದಿದವರಿಗೆ ಬಣ್ಣಿಸಿಹೇಳುವ ಅಗತ್ಯವಿಲ್ಲ. ಸುಶಿಕ್ಷಿತ ಭಾರತೀಯರನೇಕರೇ ತಮ್ಮ ಪ್ರಾಂತಿಕ ಭಾಷೆ ಸಂಸ್ಕೃತಿಯ ಹೊರಗೆ ಕಣ್ಣೆತ್ತಿ ನೋಡದ ಈ ಕಾಲದಲ್ಲಿ ಇಂತಹ ಹಿರಿಹೊತ್ತಿಗೆ ಅತ್ಯುಪಯುಕ್ತ. ಕದಂಬ, ಚಾಲುಕ್ಯ, ರಾಷ್ಟ್ರಕೂಟ, ಯಾದವ ಅರಸರೆಲ್ಲರೂ ಕನ್ನಡಿಗರೇ ಇದ್ದರೆಂದೂ, ಬಲಿಷ್ಠರಾಜ್ಯಕಟ್ಟಿ ವೈಭವದಿಂದ ಆಳಿದರೆಂದೂ ಸಾಧಾರವಾಗಿ ಭಾರತೀಯರೆಲ್ಲರಿಗೂ ತಿಳಿಸಿ ಕೊಟ್ಟದ್ದು ಸಣ್ಣ ಸಂಗತಿಯೆ ? ಕರ್ನಾಟಕವು ತನ್ನ ಗತವೈಭವದ ಅರಿವನ್ನು ಇಡೀ ಭಾರತಕ್ಕೆ ಇಂದು ಮಾಡಿಕೊಟ್ಟುದುದಲ್ಲದೆ ಜಗತ್ತಿನ ಜ್ಞಾನ ಭಾಂಡಾರಕ್ಕೆ ತನ್ನ ಕಾಣಿಕೆ ಸಲ್ಲಿಸಿದೆ ಎಂದು ಪ್ರಸ್ತುತಗ್ರಂಥವು ವಿವರಿಸುವದು. ಕರ್ನಾಟಕದ ಭಿನ್ನವಿಭಿನ್ನತೆಯ ಸ್ಥಿತಿ ಬಣ್ಣಿಸಿ ಅದರ ಸಾಂಸ್ಕೃತಿಕ

ಆಕಾಂಕ್ಷೆಗಳು ಪೂರ್ಣವಾದ ದಿನವೇ ಭಾರತದ ಉಜ್ವಲತೆಗಾಗಿ ಅದು ಹೆಣಗಾಡುವದು ನಿಶ್ಚಿತವೆಂದು ಮಂಡಿಸುವದು. ಒಟ್ಟು ಈ ಮಾದರಿಯ ಪ್ರಥಮ ಹೊತ್ತಿಗೆ ಎಂದರೆ ಮುಗಳಿಯವರದೇ ಎಂದು ಯಾರಿಗೂ ಎನಿಸದೇ ಹೋಗದು. ಭಾರತದ ಪ್ರಾಂತಪ್ರಾಂತಗಳು ತಮ್ಮ ತಮ್ಮ ಹೆಚ್ಚಳವನ್ನು ಈ ಬಗೆಯಾಗಿ ಬಣ್ಣಿಸುತ್ತ ಹೋದಲ್ಲಿ ಅನವಶ್ಯಕ ಅಸೂಯೆ ದ್ವೇಷಭಾವನೆ ನಿರ್ನಾಮವಾಗಿ ಭಾರತವು ಇಂದು ಒಂದು ಎಂಬ ಕಲ್ಪನೆ ಎಲ್ಲ ಪರದೇಶದವರಿಗೆ ಮನವರಿಕೆಯಾಗುವದರಲ್ಲಿ ಸಂದೇಹವೇನು ?

........ಪಾರ್ಸಿಕೋಟು, ಬಿಳ್ಕನ್ನ ಧೋತರ. ಅಚ್ಚುಕಟ್ಟಾಗಿ ಹಿಕ್ಕಿದ ತಲೆಗೂದಲು, ಅದರ ಅರೆ ಆವರಣವೆನಿಸುವ ಶಿರಸ್ತ್ರಾಣ, ಅಚ್ಚರಿ ಆನಂದ ಪಾಂಡಿತ್ಯ ಹೊರಸೂಸುವ ಕಾಂತಿಯುತ ಕಣ್ಣುಗಳು, ಮುಗುಳುನಗೆ, ತೆಳ್ಳಗಿನ ನಿಲುವು, ಗೌರವರ್ಣ, ಪ್ರಶಾಂತಮುಖಮುದ್ರೆ, ಸಂತತವೂ ನಯವಿನಯದ ನುಡಿಯ ರಸಿಕವ್ಯಕ್ತಿಯೇ—ರಂ. ಶ್ರೀ. ಮುಗಳಿಯವರು—ಎಂದಷ್ಟೇ ಕೊನೆಗೆ ಹೇಳಿದರೆ ಸಾಕು. ಅವರ ವ್ಯಕ್ತಿತ್ವದ ಸರಲತೆ ಚಿತ್ರಿಸುವ ಬೇರೆ ನಿದರ್ಶನಗಳೇ ಕಾರಣವಿಲ್ಲ !

---

